ಕಾಯಕವೇ ಕೈಲಾಸ



# ಸಿದ್ಧಗಂಗಾ



ಸ್ವಾತಂತ್ರ್ಯೋತ್ಸವದ
ಹಾರ್ದಿಕ ಶುಭಾಶಯಗಳು

ಸಂಪುಟ : ೫೨ ಆಗಸ್ಟ್ ೨೦೧೬ ಸಂಚಿಕೆ : ೦೮



ಬಾಳೆಹೊನ್ನೂರು ರಂಭಾಪುರಿ ಪೀಠದ ಜಗದ್ಗುರು ಪೂಜ್ಯ ಶ್ರೀ ಶ್ರೀ ಪ್ರಸನ್ನ ರೇಣುಕ ವೀರಸೋಮೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳವರು ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಆರೋಗ್ಯ ವಿಚಾರಿಸಿದರು. ಈ ಸಂದರ್ಭದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು, ಪೂಜ್ಯ ಶ್ರೀ ಶ್ರೀ ವೀರಭದ್ರ ಶಿವಾಚಾರ್ಯ ಸ್ವಾಮಿಗಳು, ಶ್ರೀ ಎನ್.ಆರ್. ಜಗದೀಶ್ ಮೊದಲಾದವರು ಉಪಸ್ಥಿತರಿದ್ದರು.







ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು, ಚಿತ್ರದುರ್ಗದ ಶ್ರೀ ಮುರುಘಾ ಮಠದ ಪೂಜ್ಯ ಶ್ರೀ ಶ್ರೀ ಮುರುಘರಾಜೇಂದ್ರ ಶರಣರು ಹಾಗೂ ಆದಿಚುಂಚನಗಿರಿ ಮಠದ ಪೂಜ್ಯ ಡಾ. ಶ್ರೀ ಶ್ರೀ ನಿರ್ಮಲಾನಂದ ಸ್ವಾಮಿಗಳು ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀ ಶ್ರೀಗಳವರ ದರ್ಶನ ಮಾಡಿ ಆರೋಗ್ಯ ವಿಚಾರಿಸಿದರು. ಈ ಸಂದರ್ಭದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ಉಪ್ಥಿತರಿದ್ದರು.





॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ


ಸಂಪುಟ : ೫೨ ಆಗಸ್ಟ್ ೨೦೧೬ ಸಂಚಿಕೆ : ೦೮


## ಒಳಪುಟಗಳಲ್ಲಿ ..................




ಸಂಪಾದಕರು :
**ಹೆಚ್.ವಿ. ವೀರಭದ್ರಯ್ಯ**

ಸಹ ಸಂಪಾದಕರು :
**ಎಚ್.ಎಸ್. ಸಿದ್ಧಗಂಗಪ್ಪ**

ಸಹಾಯಕ ಸಂಪಾದಕರು :
**ಕೆ.ಬಿ. ಶಿವಶಂಕರಯ್ಯ**

ಸಂಚಾಲಕರು :
**ಎಂ. ರೇಣುಕಾರಾಧ್ಯ**

ವಿತರಕರು :
**ಆರ್.ಎಸ್. ಮಲ್ಲೇಶಪ್ಪ**

ಪ್ರಕಾಶಕರು :
**ಹೆಚ್.ಬಿ. ಗಂಗಾಧರಯ್ಯ**

ಛಾಯಾಚಿತ್ರ ಸಂಗ್ರಾಹಕರು :
**ಸಿ. ಕುಮಾರಸ್ವಾಮಿ**

ಪ್ರಕಾಶನ :
**ಹಳೆಯ ವಿದ್ಯಾರ್ಥಿಗಳ ಸಂಘ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ –572 104.

ಮುದ್ರಕರು:
**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಆಫ್‌ಸೆಟ್ ಮುದ್ರಣಾಲಯ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು–572 104.

ವಿಳಾಸ :
**"ಸಂಪಾದಕರು"**
**'ಸಿದ್ಧಗಂಗಾ' ಮಾಸಪತ್ರಿಕೆ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ–572 104
ದೂ: 0816–2282322.





ಚಂದಾ ವಿವರ : ವಾರ್ಷಿಕ ಚಂದಾ ರೂ. 200/–
ಆಜೀವ ಸದಸ್ಯತ್ವ ರೂ. 1500/– ಬಿಡಿ ಪ್ರತಿ ರೂ. 12.00



## ಪರಮಪೂಜ್ಯ ಶ್ರೀಗಳವರ ಆರೋಗ್ಯ ಭಾಗ್ಯಕ್ಕೆ ಹರಗುರು ಚರಮೂರ್ತಿಗಳು, ಭಕ್ತರು ಹಾಗೂ ಅಭಿಮಾನಿಗಳಿಂದ ದೇವರಲ್ಲಿ ಪ್ರಾರ್ಥನೆ

ಜೂನ್ ೨೪ರಂದು ಶ್ರೀಮಠದ ಭಕ್ತಲೋಕಕ್ಕೆ ತಲ್ಲಣಿಸುವಂತಹ ಪರಿಸ್ಥಿತಿಯುಂಟಾಯಿತು. ಪರಮಪೂಜ್ಯ ಶ್ರೀಶ್ರೀಗಳು ತೀವ್ರವಾದ ಅನಾರೋಗ್ಯಕ್ಕೆ ಒಳಗಾದರು. ಬೆಂಗಳೂರಿನ ಬಿ.ಜಿ.ಎಸ್. ಆಸ್ಪತ್ರೆಗೆ ಕರೆದೊಯ್ಯಲಾಯಿತು. ಸುಪ್ರಸಿದ್ಧ ವೈದ್ಯಬಂಧುಗಳ ಚಿಕಿತ್ಸೆ ಒದಗಿ ಬಂದಿತು. ಸಣ್ಣದಾಗಿ ಅಪರೇಷನ್ ಕೂಡ ಮಾಡಲಾಯಿತು. ಅಭಿಮಾನಿಗಳು, ಹಳೆಯ ವಿದ್ಯಾರ್ಥಿಗಳು, ಭಕ್ತ ಸಮುದಾಯ, ತುದಿ ಬೆರಳಿನ ಮೇಲೆ ನಿಂತು ವೈದ್ಯರ ಮಾತುಗಳಿಗೆ ಕಿವಿಗೊಡುವಂತಹ ಆತಂಕದ ನಿಮಿಷಗಳು. ಏನಾಗಿದೆ? ಆರೋಗ್ಯವಾಗಿರುವರು ತಾನೆ? ಏನಾದರೂ ಸಹಿಸಿ ಕೊಂಡಿರುವರೆ? ಮುಂತಾದ ಮಾತುಗಳು. ಆರೋಗ್ಯ ಮುಖರಾಗಿ ೨೫-೦೬-೨೦೧೬ರಂದು ಶ್ರೀಮಠಕ್ಕೆ ಮರಳಿ ಬಂದರು ಪೂಜ್ಯರು. ಎಲ್ಲರು ನಿಟ್ಟುಸಿರು ಬಿಟ್ಟರು. ಯಥಾರೀತಿಯಲ್ಲಿ ಶ್ರೀಗಳು ಪೂಜೆ, ನಿತ್ಯಕಾಯಕದಲ್ಲಿ ತೊಡಗಿದರು.

ಪೂಜ್ಯ ಶ್ರೀಗಳ ಆರೋಗ್ಯ ವಿಚಾರಿಸಲು ರಾಜ್ಯದ ಮುಖ್ಯಮಂತ್ರಿ ಶ್ರೀ ಸಿದ್ಧರಾಮಯ್ಯನವರು, ಮಾಜಿ ಮುಖ್ಯಮಂತ್ರಿ ಶ್ರೀ ಬಿ.ಎಸ್. ಯಡಿಯೂರಪ್ಪನವರು, ಬಿಜಿಎಸ್ ಆಸ್ಪತ್ರೆಗೆ ಧಾವಿಸಿ ಬಂದರು. ಪೂಜ್ಯರೊಂದಿಗೆ ಮಾತನಾಡಿದರು. ರಾಜ್ಯದ ಉದ್ದಗಲಕ್ಕೆ ಸುದ್ದಿ ಟಿ.ವಿ.ಯ ಮೂಲಕ ಪತ್ರಿಕೆಗಳ ಮೂಲಕ ಪ್ರಸಾರವಾಯಿತು. ಮೂಲೆಮೂಲೆಗಳಿಂದ ವಿವಿಧ ಮಠಾಧೀಶರು, ಹರಗುರು ಚರಮೂರ್ತಿಗಳು, ಗಣ್ಯಮಾನ್ಯರು, ಸಾಹಿತಿಗಳು, ದೌಡಾಯಿಸಿ ಆಗಮಿಸುತ್ತಲೇ ಬಂದರು. ಪೂಜ್ಯ ಶ್ರೀಗಳ ಆರೋಗ್ಯ ಭಾಗ್ಯಕ್ಕೆ ದೇವರಲ್ಲಿ ಪ್ರಾರ್ಥಿಸಿದರು. 'ಇದು ಭಾಗ್ಯ ಇದು ಭಾಗ್ಯ ಇದು ಭಾಗ್ಯ' ಎಂಬಂತೆ ಪೂಜ್ಯರ ಆರೋಗ್ಯ ಭಾಗ್ಯವನ್ನು ಕಂಡು ಕಣ್ತುಂಬಿಕೊಂಡು ಸಮಾಧಾನ ತಂದುಕೊಂಡರು. ಇದೀಗ ಪೂಜ್ಯ ಶ್ರೀಗಳು ಎಂದಿನಂತೆ ತಮ್ಮ ಸೇವಾಕಾರ್ಯಗಳನ್ನು ಮುಂದುವರೆಸಿದ್ದಾರೆ. ಭಕ್ತರಿಗೆ ಸಂತೋಷ ಬಂದಿದೆ. ಶ್ರೀಗಳವರ ಆರೋಗ್ಯಕ್ಕಾಗಿ ಹಾರೈಸಿದ ಸಮಸ್ತರಿಗೂ 'ಸಿದ್ಧಗಂಗಾ' ವಂದನೆಗಳನ್ನು ಸಲ್ಲಿಸುತ್ತದೆ.

ಪ್ರೊ. ಹೆಚ್.ವಿ. ವೀರಭದ್ರಯ್ಯ
ಸಂಪಾದಕರು





## ರಾಷ್ಟ್ರ ಸೇವೆಯೊಂದೇ ಆದರ್ಶವಾಗಬೇಕು



'ಭಾರತದ ಆತ್ಮ ಹಳ್ಳಿಗಳಲ್ಲಿದೆ' ಎನ್ನುತ್ತಿದ್ದರು ಮಹಾತ್ಮ ಗಾಂಧೀಜಿಯವರು. ದೇಶದ ಆತ್ಮದರ್ಶನಕ್ಕಾಗಿ ಇಂದು ಗ್ರಾಮ ಜೀವನದ ನೇರ ಪರಿಚಯಕ್ಕಾಗಿ ಹಲವು ಹನ್ನೊಂದು ರೂಪದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಅನಿವಾರ್ಯತೆ ಇದೆ. ಗ್ರಾಮೀಣ ಯುವ ಜನಾಂಗವನ್ನು ಸಂಘಟಿಸುವುದರ ಜೊತೆಗೆ ಸುವ್ಯವಸ್ಥಿತ ರೀತಿಯಲ್ಲಿ ರೂಪಿಸುವ ಆದ್ಯ ಕರ್ತವ್ಯ, ಸರ್ಕಾರ, ಸಮಾಜ ಹಾಗೂ ಸ್ವಯಂ ಸೇವಾಸಂಘಗಳ ಜವಾಬ್ದಾರಿಯಾಗಿದೆ. **'ಯುವ ಜನತೆ ರಾಷ್ಟ್ರದ ಅಮೂಲ್ಯ ಸಂಪತ್ತು'** ಎಂಬ ಗಾಂಧೀಜಿಯವರ ವಾಣಿಯಲ್ಲಿ ಅರ್ಥವಿದೆ. ಕೇವಲ ಹಿಮಾಲಯ, ಸಹ್ಯಾದ್ರಿ, ಶ್ರೀಶೈಲಗಳು, ಗಂಗಾ, ಸಿಂಧೂ, ಕಾವೇರಿ, ತುಂಗಭದ್ರಾಗಳು ಮಾತ್ರವೇ ಭಾರತದ ಐಶ್ವರ್ಯವಲ್ಲ, ಶಿಸ್ತಿನ ಅರ್ಪಿತ ಮನೋಭಾವದ ಸುಸಂಸ್ಕೃತ ಸದೃಢ ಯುವ ಜನಾಂಗ ನಿಜವಾದ ಐಶ್ವರ್ಯವೆಂಬುದನ್ನು ಮನಗಾಣಬೇಕಾಗಿದೆ. ಆ ಐಶ್ವರ್ಯ ಸ್ಥಾವರವಾದುದಲ್ಲ. ಜಂಗಮಶೀಲ ವಾದುದು. 'ಸರ್ವ ಭೂತಸ್ಥ ಮಾತ್ಮಾನಾಮ್ ಸರ್ವಭೂತಾನಿ ಚಾತ್ಮನಿ ಈಕ್ಷತೇ ಯೋಗ ಯುಕ್ತಾತ್ಮ ಸರ್ವತ್ರ ಸಮದರ್ಶಿನಃ' ರನ್ನಾಗಿ ಯೋಗಯುಕ್ತ ಚಿತ್ತವುಳ್ಳವರನ್ನಾಗಿ, ಎಲ್ಲೆಲ್ಲಿಯೂ ಸಮದೃಷ್ಟಿಯುಳ್ಳವರಾಗಿ ತನ್ನನ್ನು ಎಲ್ಲಾ ಭೂತಗಳಲ್ಲಿ ತನ್ನಲ್ಲಿ ಎಲ್ಲಾ ಭೂತಗಳನ್ನು ಕಾಣುವಂತೆ ರೂಪಿಸುವುದಾದರೆ ಸಾರ್ಥಕತೆಯಾದೀತು. ಇಂದಿನ ಯುವ ಜನಾಂಗದ ಮುಂದೆ ರಾಷ್ಟ್ರ ಸೇವೆಯೊಂದೇ ಆದರ್ಶವಾಗಬೇಕು. ಅದುವೇ ಅವರ ಧರ್ಮ, ದೇವರು ಎಂಬುದನ್ನು ಮನಗಾಣಬೇಕು. ರಾಷ್ಟ್ರಕಲ್ಯಾಣದಲ್ಲಿ ಆತ್ಮಕಲ್ಯಾಣವಿದೆ.

*

### ಸ್ವಾತಂತ್ರ್ಯ

ಸ್ವಾತಂತ್ರ್ಯ ಬಂದ ಮೇಲೆ ಸೋಮಾರಿಗಳು, ಮೈಗಳ್ಳರು ಹೆಚ್ಚಿದ್ದಾರೆ. ಶ್ರಮಜೀವಿಗಳು, ಸರಳಜೀವಿಗಳು ಕಣ್ಮರೆಯಾಗುತ್ತಿದ್ದಾರೆ. ಇದು ದೇಶದ ದುರ್ದೈವ. ಜನ ಬದಲಾಗಬೇಕು. ಬದಲಾವಣೆ ಕರ್ಮಶೀಲತೆಯನ್ನು ಧರ್ಮ ಬುದ್ಧಿಯನ್ನು ಹೃದಯವಂತಿಕೆಯನ್ನು ತಂದು ಕೊಡಬೇಕು. ಶೂದ್ರನನ್ನು ತಪಸ್ವಿಯಾಗಿಸುವ, ಶಿವಯೋಗಿಯನ್ನಾಗಿಸುವ ಬದಲಾವಣೆ ಬರಬೇಕು. ಅದು ಹೃದಯವಂತಿಕೆಯಿಂದ ಮಾತ್ರ ಸಾಧ್ಯ.

❑

## ಶ್ರೀ ಸಿದ್ಧಲಿಂಗೇಶ್ವರ ವಚನ



*ಲಲನೆಯರ ನಟನೆಯೆಂಬ ಕುಟಿಲಕ್ಕೆ ಸೆರೆಯ ಸಿಕ್ಕಿ*
*ಕೋಟಲೆಗೊಳ್ಳದಿರಾ ಮರುಳು ಮಾನವಾ*
*ನಿಟಿಲ ತಟದಲ್ಲಿ ಮಠವ ಮಾಡಿಕೊಂಡು ನಿಶ್ಚಿಚಿತ ನಿರಾಳನಾಗಿರಾ*
*ಹುಸಿಯ ಮಾಯಾ ತಮಂಧಕ್ಕೆ ದಿಟಪುಟ ದಿವಾಕರ ಎನ್ನೊಡೆಯ*
*ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ*

ಲಲನೆಯರ ಷಟ್ತ್ರಿಕಾರವಾದ ಸ್ತ್ರೀಯರುಗಳ, ನಟನೆಯೆಂಬ ಹಾವಭಾವ ವಿಲಾಸ ವಿಭ್ರಯಗಳೆಂಬ ಕುಟಿಲಕ್ಕೆ – ಕಾಪಟ್ಯಕ್ಕೆ, ಸೆರೆಯ ಸಿಕ್ಕಿ – ವಶಗತವಾಗಿ, ಕೋಟಲೆಗೊಳ್ಳದಿಣ – ಆಯಾಸಗೊಳ್ಳದಿಣ, ಮರುಳು ಮಾನವ – ಎಲೆ ಹುಚ್ಚು ಮನುಷ್ಯನೆ, ನಿಟಿಲತಟದಲ್ಲಿ ಹಣೆ ಸಮೀಪಸ್ಥವಾದಂಥ – ಭ್ರುಕುಟಿ ಸ್ಥಾನದಲ್ಲಿ ನೆಲೆಗೊಂಡಿರುವಂಥಾದೆ ಕಾರದ ಬ್ರಹ್ಮತ್ರ, ಆ ಕಾರಕ ಬ್ರಹ್ಮವು ಅಡಗುವುದಕ್ಕೆ, ಮಠವ ಮಾಡಿಕೊಂಡು – ನಿನ್ನ ದೇಹವನೆ ಆಲಯ ಮಾಡಿಕೊಂಡು, ನಿಶ್ಚಿಂತ – ಚಿಂತೆ ರಹಿತವಾದ, ನಿರ್ರಾಳನಾಗಿರಾ – ಆರೂ ಕಾಣಿಸಿಕೊಳ್ಳುಬಾರದ ಬ್ರಹ್ಮದಲಿ ಕೂಡಿ ಬ್ರಹ್ಮವೆ ನೀನಾಗಿರಾ, ಹುಸಿಯ ಸಟೆಯ, ಮಾಯಾ ತಮಂಧಕ್ಕೆ, ಅವಿಧ್ಯೆಯೆಂಬ ಕಾವಳಕ್ಕೆ, ದಿಟ – ನಿಶ್ಚಯವಾದ, ಪುಟ-ವ್ಯಕ್ತವಾದ, ದಿವಾಕರ ಚಿತ್ಸ್ಯಾರ್ಯನಾದಂಥ, ಎನ್ನೆಡೆಯ ಎನ್ನ ಕರ್ತೃ ಸ್ವರೂಪವಾದಂಥ ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು- ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ(ರಿ.) ಎಡೆಯೂರು-ಕುಣಿಗಲ್ ತಾಲ್ಲೂಕು)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ತನ್ನನರಿದವಗೆ ಹಿಂದಿಲ್ಲ ಮುಂದಿಲ್ಲ
ಮುನ್ನ ತಾನೆಂಬುದು ಮೊದಲಿಲ್ಲ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀರಿಂದಾದ ಮುತ್ತು ನೀರಾಗದ ತೆರದಿ
ನೀನಾಗುಸ್ ಎಂದು ಹರಸಿದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗಂಧ ಗಾಳಿಯ ಸ್ನೇಹ ಚಂದ್ರಭೂಮಿಯ ಸ್ನೇಹ
ಲಿಂಗ ಜಂಗಮದ ಸವಿಸ್ನೇಹ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗಾಳಿ ಬಂದಾಗ ಕಾಳ ತೂರಿಕೋ ನೀನೆಂದೆ
ನಾಳೆ ಎಂಬುದ ಬಿಡು ಎಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆಧಾರವೆ ಬಸವಣ್ಣ ಆರಾಧ್ಯನೆ ಬಸವಣ್ಣ
ಅರಿವು ಅನುಭಾವಕೆ ಬಸವಣ್ಣ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅರಿದು ಆಚರಿಸುವ ಸದುಭಕ್ತ ನೀನಾಗು
ಅರಿವುಳ್ಳ ಗುರುವಿಡಿದು ನೀನಾಗು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮ್ಮ ಪಾದೋದಕ ಅವಗುಣವ ಕಳೆಯಿತು
ನಿಮ್ಮ ಪ್ರಸಾದ ಬದುಕಿಸಿತು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿನ್ನ ಪಾದ ತೀರ್ಥ ಎನ್ನಂಗವ ಮಡಿ ಮಾಡಿ
ಲಿಂಗಮುಖಿಯಾಗಿ ನಡೆಸಿದೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜಂಗಮವೆಂಬುದು ನಡೆನುಡಿ ಬೆಸೆದುದು
ಮೂರು ಮಲವ ಮೀರಿದ ಪರುಷವು ಎನ್ನುವ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜಾತ್ರಿಭ್ರಮೆ ನೀಗಿದ ನೀತಿ ಭ್ರಮೆ ನೀಗಿದ
ಕ್ಷೇತ್ರ ಭ್ರಮೆ ನೀಗಿದ ಶಿವಯೋಗಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ







# ವಿದ್ಯಾವಾರಿಧಿ

– ಶ್ರೀ ಸಿದ್ಧೇಶ್ವರ ಸ್ವಾಮಿಗಳು *

ಶ್ರೀ ಗುರುವು ಆಧ್ಯಾತ್ಮಿಕ ಸಾಮ್ರಾಜ್ಯದ ಅನಭಿಷಕ್ತ ಚಕ್ರವರ್ತಿ. ಆತ್ಮವಿದ್ಯಾವಾರಿಧಿ, ಆತ್ಮಾನುಭವದ ಮೂಲಸ್ತೋತ್ರ. ಈ ಅಮೃತವಿದ್ಯೆಯು ಗುರುವಿನ ಅಂತರಂಗಕ್ಕೆ ಮೊದಲು ಅವತರಿಸುತ್ತದೆ. ಲೋಕಕಲ್ಯಾಣಕ್ಕಾಗಿ ಆತನ ಶ್ರೀಮುಖದಿಂದ ಹೊರಹೊಮ್ಮುತ್ತದೆ. ಅದೇ ಪವಿತ್ರವಚನ ! ಪ್ರವಚನಾಮೃತ ಸಿಂಚನ !!

ಪತಂಜಲರು ಆತ್ಮಾನುಭಾವಿಗಳು. ಪರಮಯೋಗಾಚಾರ್ಯರು. ನಿರ್ವಿಕಲ್ಪ ಸಮಾಧಿಯ ನಿಜಾನುಭಾವಿಗಳು. ಅವರು ಪರಮಗುರುವಿನ ಕುರಿತು ಒಂದು ಮಾತನ್ನು ಹೇಳುತ್ತಾರೆ.

*ಪೂರ್ವೇಷಾಮಪಿ ಸಃ ಗುರು ಕಾಲೇನ ಅನವಚ್ಛೇದಾತ್*

ಜಗತ್ತಿನ ಅಂದಿನ, ಇಂದಿನ ಗುರುಗಳೆಲ್ಲರ 'ಗುರುತ್ವ' ಯಾವುದು ಎಂಬುದನ್ನು ಅಚ್ಚಳಿಯದೆ ನಾಲ್ಕೈದು ಶಬ್ದಗಳಲ್ಲಿ ಅಂದವಾಗಿ ವರ್ಣಿಸಿರುವರು. 'ಕಾಲದಿಂದ ಎಂದೆಂದೂ ಅವಚ್ಛೇದನವಾಗದ ತತ್ತ್ವಜ್ಞಾನವುಳ್ಳವನೇ ಪರಮಗುರು.'

ಜಗತ್ತಿನ ಎಲ್ಲ ವಸ್ತುಗಳು ಕಾಲದಿಂದ ಅವಿಚ್ಛಿನ್ನವಾಗಿವೆ. ಅಂತೆಯೇ ಅವುಗಳ ಜ್ಞಾನವಾದರೂ ಕಾಲದಿಂದ ಖಂಡಿತವಾಗಿದೆ. ಈ ಕ್ಷಣದಲ್ಲಿ ಹೂವಿನ ಜ್ಞಾನ. ಇನ್ನೊಂದು ಕ್ಷಣದಲ್ಲಿ ಹಣ್ಣಿನ ಜ್ಞಾನ, ಮತ್ತೊಂದು ಕ್ಷಣದಲ್ಲಿ ಮಣ್ಣಿನ ಜ್ಞಾನ.

ಹೂವಿನ ಜ್ಞಾನ ಇರುವ ಕ್ಷಣದಲ್ಲಿ ಹಣ್ಣಿನ ಜ್ಞಾನವಿಲ್ಲ. ಹಣ್ಣಿನ ಜ್ಞಾನ ಇರುವ ಕ್ಷಣದಲ್ಲಿ ಹೂವಿನ ಜ್ಞಾನವಿಲ್ಲ. ಹೂವು-ಹಣ್ಣುಗಳ ನೆನಹು ಇರಬಹುದು. ನೆನಹು ಜ್ಞಾನವಲ್ಲ. ಈ ಹೂವು, ಹಣ್ಣು, ಮಣ್ಣುಗಳೆಲ್ಲ ಅಶಾಶ್ವತ, ಕ್ಷಣಿಕ. ಆದ್ದರಿಂದ ಅವುಗಳ ಜ್ಞಾನವಾದರೂ ಕ್ಷಣವರ್ತಿಯಾಗಿದೆ.

ಜಗತ್ತಿನಲ್ಲಿ ಇಂಥ ವಸ್ತುಗಳು ಅಸಂಖ್ಯ. ಅವುಗಳ ಜ್ಞಾನದ ತುಕಡಿಗಳು ಭಿನ್ನಭಿನ್ನ. ಕೆಲವರು ಹೆಚ್ಚು ವಸ್ತುಗಳನ್ನು ನೋಡುತ್ತಾರೆ. ಕೇಳುತ್ತಾರೆ. ಕಲ್ಪಿಸುತ್ತಾರೆ. ಆ ವಸ್ತುಗಳ ಜ್ಞಾನದ ತುಕಡಿಗಳನ್ನು ತಮ್ಮ ತಲೆಯಲ್ಲಿ ಶೇಖರಿಸಿಕೊಳ್ಳುತ್ತಾರೆ. ಅವರು ವಿದ್ಯಾವಂತರು, ಪಂಡಿತರು.

ಈ ಕ್ಷಣವರ್ತಿಜ್ಞಾನಗಳ ಸೀಮೆಗಳನ್ನು ತೆಗೆದಾಗ ನಿಸ್ಸೀಮ ಕಾಲಾತೀತಜ್ಞಾನ ಉಳಿಯುತ್ತದೆ. ಅದು ಹೂವಿನ ಜ್ಞಾನವಲ್ಲ. ಹಣ್ಣಿನ ಜ್ಞಾನವಲ್ಲ, ಅದು ಕೇವಲ ಜ್ಞಾನ ! ಮಹಾಪ್ರಜ್ಞೆ ! ಅದು ಅನಂತ, ಅಖಂಡ, ಅದ್ವಿತೀಯ !! ಅದರ ಅರಿವು ಅನುಭವವುಳ್ಳಾತನೇ ಪರಮಗುರುವು. ಆ ಮಹಾಪ್ರಜ್ಞೆಯ ಹೊಳಹನ್ನುಳ್ಳ ಈ ಪರಮಗುರುವಿಗೆ ಜಗತ್ತಿನ ಬೇರೆ ಬೇರೆ ಧರ್ಮಗ್ರಂಥಗಳ ಪರಿಚಯವಿಲ್ಲದಿರಬಹುದು. ಅವೆಲ್ಲವೂ ಆತನ ಮಹಾಪ್ರಜ್ಞೆಯ ಸಾಗರದಲ್ಲಾಡುವ ತೆರೆಗಳು, ವಿಚಾರ ವೀಚಿಗಳು.

ಕೆರೆ, ಹಳ್ಳ, ಬಾವಿಗಳನ್ನು ಬಲ್ಲವರು ಗುರುಗಳು. ಮಹಾಸಾಗರದ ಅಂತರಂಗ, ನೆಲೆಕಲೆ, ಘನಗಂಭೀರತೆಯನ್ನು ಬಲ್ಲವ ಮಹಾಗುರು. ಆತ ಕೇವಲ ಗ್ರಂಥಗಳನ್ನು ಓದಿ ಕೇಳಿ ಮಾತನಾಡುವುದಿಲ್ಲ. ಆತನ ಅಂತರಂಗದಿಂದ, ಪ್ರಜ್ಞಾಸಾಗರದಿಂದ ತಾವೇ ತಾವಾಗಿ ನುಡಿಮುತ್ತುಗಳು ಹೊರಹೊಮ್ಮುತ್ತವೆ.

ಸಾಗರಾಂತರ್ಯದಲ್ಲಿ ಜೀವಿಸುವ ತಿಮಿಂಗಿಲಾದಿಗಳು ಸಾಗರದ ರುದ್ರ ರಮಣೀಯತೆಯನ್ನು ಬಲ್ಲವು. ಸಾಗರದ ದಡದಲ್ಲೀಜುವ ಮರಿಮೀನುಗಳು, ಕಿರು ಕಪ್ಪೆಗಳೇನು ಬಲ್ಲವು? ಆ ಮಹಾಪ್ರಜ್ಞಾಸಾಗರದ ಅಂತರಂಗವ ಬಗೆದು ಬಂದವ ಪರಮಗುರು. ಸಚ್ಚಿದಾನಂದ ಸ್ವರೂಪನಾದ ದೇವನ ವಿರಾಡ್ರೂಪವನ್ನು ಅವನೇ ಬಲ್ಲನು. ಸಾಗರದ ತೆರೆಯ ಮೇಲಾಡುವ, ದಡದಲ್ಲಿರುವ ನಾವೇನು ಬಲ್ಲೆವು?

ಈ ಜಗತ್ತು ಆ ಮಹಾಪ್ರಜ್ಞಾಸಾಗರದ ಮೇಲೆ ತೋರಿದ ತೆರೆ. ತೆರೆಯ ರೂಪದ ಈ ಜಗವನ್ನರಿತ ಗುರು. ಇಂಥ ಅನಂತ ತೆರೆಗಳಿಗಾಧಾರವಾದ ಜಗದೀಶನನ್ನರಿತವ ಪರಮಗುರು.

ದೇವರು ಅನಂತಪ್ರಜ್ಞೆಯ ಮಹಾಸಾಗರ. ಪರಮ ಗುರುವು ಈ ಅನಂತಪ್ರಜ್ಞೆಯನ್ನು ಅನವರತ ತನ್ನಂತರದಲ್ಲಿ ಧರಿಸಿರುವನು. ಆದ್ದರಿಂದ ಈ ಗುರುವೂ ಆ ದೇವರ ಸ್ವರೂಪನೇ ! ಈಶ್ವರನೇ !! ಎನ್ನುತ್ತಾರೆ ಪತಂಜಲಿ ಮಹರ್ಷಿಗಳು. ಅಂತೆಯೇ

*ಗುರುರ್ಬ್ರಹ್ಮಾ ಗುರುರ್ವಿಷ್ಣುಃ ಗುರುರ್ದೇವೋ ಮಹೇಶ್ವರಃ ।*
*ಗುರುಸಾಕ್ಷಾತ್ ಪರಬ್ರಹ್ಮ ತಸ್ಮೈ ಶ್ರೀ ಗುರುವೇ ನಮಃ॥*

ಎಂದಿದೆ ಶ್ರುತಿ.

ಇಂಥ ಪರಮಗುರುವಿನ ಪವಿತ್ರಸಾನ್ನಿಧ್ಯವನ್ನರಸಿ ಬಂದವನೇ ಸಚ್ಛಿಷ್ಯ. ಅವರಿಬ್ಬರೂ ಒಂದೆಡೆ ಸಂಧಿಸುತ್ತಾರೆ. ಏತಕ್ಕೆ...?

ನಮ್ಮ ಹಿತ್ತಲಿನಲ್ಲಿ ಹೂವರಳಿದೆ. ನಮಗೇ ಗೊತ್ತಿಲ್ಲ. ಎಲ್ಲೋ ಇರುವ ದುಂಬಿ ಈ ಹೂವನ್ನರಸಿಕೊಂಡು ಬರುತ್ತದೆ. ಈ ಹೂವೇನು ದುಂಬಿಯನ್ನು ಕೈಮಾಡಿ ಕರೆಯಲಿಲ್ಲ. ಫಲತಾಂಬೂಲ ನೀಡಿ ಆಮಂತ್ರಿಸಲಿಲ್ಲ. ನಮ್ಮ ಹಿತ್ತಲಿನಲ್ಲಿರುವ, ನಮಗೆ ಗೊತ್ತಾಗದ ಈ ಹೂವು ದುಂಬಿಗೆ ಗೊತ್ತಾದುದು ಹೇಗೆ?

* ಜ್ಞಾನಯೋಗಾಶ್ರಮ, ಬಿಜಾಪುರ ಜಿಲ್ಲೆ.

ಅದೇ ದುಂಬಿಯ ವೈಶಿಷ್ಟ್ಯ. ಅರಳಿದ ಹೂವು ಮಕರಂದವನ್ನು ತುಂಬಿಕೊಂಡು, ಸುಗಂಧ ಸೂಸುತ್ತದೆ. ಹೂವಿನ ಅಂತರಾಳದಲ್ಲಿರುವ ಮಕರಂದವನ್ನು ದುಂಬಿಯ ಹೃದಯ ಗುರುತಿಸುತ್ತದೆ. ಹೂವಿದ್ದಲ್ಲಿಗೆ ಧಾವಿಸುತ್ತದೆ.

ದುಂಬಿ ಹೂವಿನ ಹೊರರೂಪವನ್ನು ನೋಡಿ ಬಂದುದಲ್ಲ. ಹಾಗಿದ್ದರೆ ನಮ್ಮ ಮನೆಯೊಳಗೆ ತೋಟದ ಹೂವಿಗಿಂತಲೂ ನೂರ್ಮಡಿ ಚೆಲುವಾದ ಬಟ್ಟೆಯ, ಬಣ್ಣದ, ಕಾಗದದ ಪ್ಲಾಸ್ಟಿಕ್ಕಿನ ಹೂವುಗಳಿವೆ. ಎಂದಾದರೂ ದುಂಬಿ ಅವುಗಳನ್ನರಸಿಕೊಂಡು ಬಂದಿತ್ತೆ?

ಸದ್ಗುರುವು ಭಗವತ್ ಕ್ಷೇತ್ರದಲ್ಲಿ ಅರಳಿದ ಅಮರಪುಷ್ಪ. ಆತನಂತರಂಗದಲ್ಲಿ ಆತ್ಮಾನುಭವದ ಮಕರಂದ. ನುಡಿಯಲ್ಲಿ ಸುಜ್ಞಾನದ ಸೌರಭ. ನಡೆಯಲ್ಲಿ ಮಹದಾನಂದದ ಮಧು. ಅದನ್ನೆಲ್ಲವನ್ನೂ ಪಡೆಯುವ ಅದಮ್ಯವಾದ ಹಂಬಲವನ್ನು ತನ್ನ ಹೃದಯದಲ್ಲಿ ತುಂಬಿಕೊಂಡಿರುವ ಶಿಷ್ಯನೇ ದೇವದುಂಬಿ.

ಆತ ಗುರುವಿನ ಬಾಹ್ಯರೂಪವನ್ನು, ಘನತೆಗೌರವವನ್ನು, ಸ್ಥಾನಮಾನವನ್ನು ನೋಡಿ ಬಂದವನಲ್ಲ. ಆ ಮಹಾಗುರುವಿನ ಅಂತರಂಗದ ಅಖಂಡ ಅನುಭಾವಾಮೃತವನ್ನು ಸವಿದು ಸಚ್ಚಿದಾನಂದಘನವನ್ನು ಅನುಭವಿಸ ಬಂದವನು.

ಅವರಿಬ್ಬರ ಸಂಬಂಧ ಅಲೌಕಿಕವಾದುದು. ಕೊಡ-ಕೊಳ್ಳುವ ಲೌಕಿಕಸಂಬಂಧ ಅವರಲ್ಲಿಲ್ಲ. ಸತ್ಯಾನುಭೂತಿಗಾಗಿ ಸಮಸ್ತ ಜಗತ್ತನ್ನೇ ಸರಿಸಿ ಬಂದವ ಗುರು. ಇಂಥ ಪರಮ ವಿರಾಗಿಯ ಪವಿತ್ರಸಾನ್ನಿಧ್ಯದಲ್ಲಿ ಆತ್ಮಾನುಭೂತಿಯ ಪಡೆಯ ಬಂದವ ಶಿಷ್ಯ. ಅವರು ನಿತ್ಯತೃಪ್ತರು. ಆನಂದವಿಹಾರಿಗಳು. ಅವರಲ್ಲಿ ಲೌಕಿಕವಾಗಿ ಕೊಡಕೊಳ್ಳುವುದೇನಿದೆ?

***ಆಚಾರ್ಯಃ ಪೂರ್ವರೂಪಂ ಅಂತೇವಾಸಿ ಉತ್ತರರೂಪಮ್ ।***
***ವಿದ್ಯಾಸಂಧಿಃ ಪ್ರವಚನಮನುಸಂಧಾನಮ್ ॥***

ಅವರಿಬ್ಬರಲ್ಲಿ ಇರುವುದು ಒಂದೇ ಒಂದು ಸಂಧಿ, ಸಂಬಂಧ; ಅದು ಆತ್ಮ ವಿದ್ಯಾಸಂಧಿ. ಗುರು ಪೂರ್ವರೂಪ, ಶಿಷ್ಯ ಉತ್ತರರೂಪ. ಅವರೀರ್ವರ ಗುರಿ ಪರಮಾನುಭವ ಬೋಧೆ ಸವಿಯುವುದು.

ಆ ಪರಮಗುರುವು ನಮ್ಮ ಗುರುವಲ್ಲ, ನಿಮ್ಮ ಗುರುವಲ್ಲ, ಯಾರ ಗುರುವೂ ಅಲ್ಲ. ಆತ ಜಗದ ಗುರು. ಜಗದ್ಗುರು. ಅನಂತಾಗಸ, ಅಖಂಡ ಬಯಲು ಯಾರವು? ನಮ್ಮ ಊರ ಮೇಲಿರುವ ಆಗಸ, ನಮ್ಮ ಮನೆಯೊಳಿರುವ ಬಯಲು ನಮ್ಮವೇ? ''ನೀವಾರವರು?'' ಎಂದು ಆಗಸಕ್ಕೆ, ಬಯಲಿಗೆ ಕೇಳಿದರೆ ಅವು ನಗದೆ ಸುಮ್ಮನಿರಲು ಸಾಧ್ಯವೆ? ಮಹಾಗುರುವು ನಿರಾಭಾರಿ ದೇಶಿಕೋತ್ತಮನು, ದೇಶಕಾಲಾತೀತನು.

ಅಂಥ ಗುರು-ಶಿಷ್ಯರ ಸಂಬಂಧ ಅನಿರ್ವಚನೀಯ, ಅವರ್ಣನೀಯ, ಅನಿಮಿತ್ತ. ಜನ್ಮಕೊಟ್ಟ ನಿಮಿತ್ತದಿಂದ ತಂದೆ-ತಾಯಿ. ಒಡಹುಟ್ಟಿದ ನಿಮಿತ್ತದಿಂದ ಸಹೋದರ-ಸಹೋದರಿಯರು. ಕೈಹಿಡಿದ ನಿಮಿತ್ತದಿಂದ ಸತಿ-ಪತಿ. ಹೀಗೆ ಪ್ರಾಪಂಚಿಕ ಎಲ್ಲ ಸಂಬಂಧಗಳು ಒಂದೊಂದು ನಿಮಿತ್ತದಿಂದಾಗಿವೆ. ಈ ನಿಮಿತ್ತಗಳಿಲ್ಲದಿದ್ದರೆ ಅವರು ನಮ್ಮತ್ತ ಹೊರಳಿಯೂ ನೋಡರು.

ಗುರುಶಿಷ್ಯರಲ್ಲಿ ಪ್ರಾಪಂಚಿಕವಾದ ಈ ಯಾವ ನಿಮಿತ್ತವೂ ಇಲ್ಲ. ಆದ್ದರಿಂದ ಗುರುವು ನಮಗೆ ಅನಿಮಿತ್ತಬಂಧು. ಆದರೂ ಗುರುವಿಗೆ ಶಿಷ್ಯರ ಮೇಲೆ ಅಸದೃಶಪ್ರೇಮ. ತಂದೆ ತಾಯಿ ಬಂಧುಬಳಕ್ಕೂ ಮೀರಿದ ಅನನ್ಯಮಮತೆ ಈ ಮನುಕುಲದ ಮೇಲೆ. ಪರಮಗುರುವು ಅನಿಮಿತ್ತವಿಶ್ವಬಂಧು. ಆದರೂ ಗುರುವಿಗೆ ಶಿಷ್ಯರ ಮೇಲೆ ಅಸದೃಶಪ್ರೇಮ. ತಂದೆ ತಾಯಿ ಬಂಧುಬಳಗಕ್ಕೂ ಮೀರಿದ ಅನನ್ಯಮಮತೆ ಈ ಮನುಕುಲದ ಮೇಲೆ. ಪರಮಗುರುವು ಅನಿಮಿತ್ತ ವಿಶ್ವಬಂಧು.

ಅನಿಮಿತ್ತಬಾಂಧವನಾದ ಈ ಪರಮಗುರುವಿನ ಶಿಷ್ಯವಾತ್ಸಲ್ಯ ಅನುಪಮವಾದುದು. ಮಹಾಮೇಧಾವಿಯಾಗಿದ್ದ ನರೇಂದ್ರನ ಮೇಲೆ ಪರಮಹಂಸರಿಗೆ ಅಪಾರಪ್ರೇಮ. ನರೇಂದ್ರನಿಗೆ ಏನೆಲ್ಲ ಅನುಭವಾಮೃತ ಉಣಬಡಿಸುವ ಹಂಬಲ ಅವರಿಗೆ. ಒಂದೊಂದು ದಿನ ನರೇಂದ್ರನು ಸತ್ಸಂಗಕ್ಕೆ ಬರಲು ತಡಮಾಡುತ್ತಿದ್ದನು. ಆಗ ಪರಮಹಂಸರು ನರೇಂದ್ರನ ಬರುವಿಗಾಗಿ ಒಂದೇಸಮನೆ ಪರಿತಪಿಸುತ್ತಿದ್ದರು. ಕೆಚ್ಚಲು ದುಂಬಿದ ತಾಯಿ ಹಸು ಕರುವಿಗಾಗಿ ದಾರಿಕಾಯುವಂತೆ, ಕಾಯುವರು. ನರೇಂದ್ರರು ಬಾರದಿದ್ದರೆ ಕಣ್ಣೀರಿಡುವರು. ಗುರುಕರುಣೆ ನಿಸ್ಸೀಮವಾದುದು !

ಭಗವಾನ್ ಬುದ್ಧನು ಜ್ಞಾನೋದಯಕ್ಕೆ ಮೊದಲು ನಿರಾಹಾರಿಯಾಗಿ ಕಠೋರ ತಪವನಾಚರಿಸಿದನು. ಆಗ ಬುದ್ಧನ ಸೇವೆಗೆಂದು ನಾಲ್ಕೈದು ಜನ ಶಿಷ್ಯರಿದ್ದರು. ಒಂದು ದಿನ ಬುದ್ಧನು ಕ್ಷುದ್ಬಾಧೆಯನ್ನು ನೀಗಲು ಒಂದಿಷ್ಟು ಆಹಾರ ಸ್ವೀಕರಿಸಿದನು. ಅದೇ ಘೋರ ಅಪಚಾರವೆಂದು ಬಗೆದರು ಶಿಷ್ಯರು. ಬುದ್ಧನ ತಪಸ್ಸು ಕೆಟ್ಟಿತು. ಇನ್ನು ನಾವಿಲ್ಲಿರಬಾರದೆಂದು ಶಿಷ್ಯರು ಬುದ್ಧನನ್ನು ತೊರೆದು ಹೋದರು.

ಮುಂದೆ ಕೆಲವೇ ದಿನಗಳಲ್ಲಿ ಬುದ್ಧನು ಸಕಲ ಆಶೆಯನ್ನು ಜಯಿಸಿದ್ದ. ಆತನ ಹೃದಯ ಹಸನಾಗಿತ್ತು. ಸತ್ಯದರ್ಶನವಾಗಿತ್ತು. ಪರಮಶಾಂತಿಯನ್ನು ಅನುಭವಿಸಿದ್ದ. ಮರುಕ್ಷಣವೇ ಬುದ್ಧನು ತನ್ನನ್ನು ಸೇವಿಸಿದ ಶಿಷ್ಯರನ್ನು ಹುಡುಕಿಕೊಂಡು ಹೊರಟಿದ್ದ. ಅವರು ಬುದ್ಧನನ್ನು ತೊರೆದರೂ, ಬುದ್ಧ ಅವರನ್ನು ತೊರೆಯಲಿಲ್ಲ. ಅವರಿಗೆ ಸತ್ಯಾಮೃತವನ್ನು ಉಣಬಡಿಸಬೇಕು. ಅವರನ್ನು ನಿರ್ವಾಣದ ಹಂತಕ್ಕೆ ತಲುಪಿಸಬೇಕೆಂದು ಹೊರಟಿದ್ದ. ಒಂದೆಡೆ ಶಿಷ್ಯರು ಕಾಣಿಸಿದರು. ಆದರೆ ಮತ್ತೆ ಬಂದ ಈ ತೋಪಭ್ರಷ್ಟ ಎಂದು ಅವರೆಲ್ಲ ಓಡಲೆತ್ನಿಸಿದರು. ಕರುಣಾಮಯಿ ಬುದ್ಧನೂ ಅವರ ಹಿಂದೆ ಓಡಿದ. ಕೂತೂಹಲಕ್ಕೆಂದು ಶಿಷ್ಯರು ಒಂದಿಷ್ಟು ಹಿಂದಿರುಗಿ ನೋಡಿದರು.





ತಮ್ಮ ಹಿಂದೆ ಪ್ರೇಮಸಾಗರವೇ ಹರಿದು ಬರುತ್ತಿರುವುದನ್ನು ಕಂಡರು. ಬುದ್ಧನ ಮುಖದಲ್ಲಿ ಪ್ರಸನ್ನತೆ. ಕಣ್ಣಲ್ಲಿ ದಿವ್ಯತೇಜ. ನಡೆಯಲ್ಲಿ ದಯೆ. ನುಡಿಯಲ್ಲಿ ಕಾರುಣ್ಯ. ಅಡಿಯಡಿಗೂ ಶಾಂತಿಯ ಸಂದೇಶ. ಅವೆಲ್ಲವೂ ಒಂದುಗೂಡಿ ಮಾಡಿದ ಬುದ್ಧನ ದಯಾಮೂರ್ತಿಯನ್ನು ಕಾಣುತ್ತಲೇ ಶಿಷ್ಯರು ಪರಮಶಾಂತಿಯನ್ನು ಅನುಭವಿಸಿದರು. 'ಬುದ್ಧಂ ಶರಣಂ ಗಚ್ಛಾಮಿ' ಎಂದು ಬುದ್ಧನ ಅಡಿಗೆ ಎಡೆಯಾದರು. ಹತ್ತು ರೂಪಾಯಿ ದಕ್ಷಿಣೆ ಬರುವಲ್ಲಿ ಐದು ಪೈಸೆ ಕಡಿಮೆ ಬಂದರೆ ಕೊರಗುವ ನಾವೆಲ್ಲಿ? ಆ ಮಹಾಗುರುವೆಲ್ಲಿ?

ಅದೇ ಶಿಷ್ಯರನ್ನು ಕರೆದುಕೊಂಡು ಬುದ್ಧನು ಜಗಕ್ಕೆ ಶಾಂತಿಸಂದೇಶವನ್ನು ಸಾರಲು ಹೊರಟ. ಉತ್ತರಭಾರತದ ತುಂಬೆಲ್ಲ ಸಂಚರಿಸಿ ದೀನರ, ದುಃಖಿಗಳ ಕಣ್ಣೀರು ಒರೆಸಿದ. ಹೇಳದೆ-ಕೇಳದೆ, ಕರೆಯದೆ-ಕರೆಯಿಸಿಕೊಳ್ಳದೆ ತಾನಾಗಿಯೇ ಊರೂರಿಗೆ ಹೋಗಿ ಪರಮಶಾಂತಿಯ ಸಂದೇಶ ಸಾರಿದ. ಜನಮನ ಅರಳಿದ ಹೂವಿನಂತಾಗಿತ್ತು! ಎಲ್ಲೆಲ್ಲೂ ಪ್ರೀತಿಯ ಸೌರಭ ತುಂಬಿ ನಿಂತಿತ್ತು!

ಇಂಥ ಗುರುಶಿಷ್ಯರ ಪವಿತ್ರ ಸಂಬಂಧವನ್ನು ಕುರಿತು ಅಲ್ಲಮಪ್ರಭುದೇವರ ಒಂದು ಸುಂದರವಚನವಿದೆ.

***ಎತ್ತಣ ಮಾಮರ ಎತ್ತಣ ಕೋಗಿಲೆ,***
***ಎತ್ತಣಿಂದೆತ್ತ ಸಂಬಂಧವಯ್ಯಾ?***
***ಬೆಟ್ಟದ ಮೇಲಣ ನೆಲ್ಲಿಯಕಾಯಿ,***
***ಸಮುದ್ರದೊಳಗಣ ಉಪ್ಪು***
***ಎತ್ತಣಿಂದೆತ್ತ ಸಂಬಂಧವಯ್ಯಾ?***
***ಗುಹೇಶ್ವರಲಿಂಗಕ್ಕೆಯೂ ಎನಗೆಯೂ ಎತ್ತಣಿಂದೆತ್ತ***
***ಸಂಬಂಧವಯ್ಯಾ?***

ಮಾಮರ ಚಿಗುರಿದೆ. ಹೂ ಬಿಟ್ಟು ಸುತ್ತ ಸುವಾಸನೆ ಹರಡಿದೆ. ವಸಂತ ಮೆಲ್ಲನೆ ಸುಳಿದಿದೆ. ದೂರದೇಶದಲ್ಲಿದ್ದ ಕೋಗಿಲೆಯ ಹೃದಯದಲ್ಲಿ ಮಾಮರದ ಚಿತ್ರ ಮೂಡಿತ್ತು. ನೋಡುನೋಡುವುದರಲ್ಲಿ ಕೋಗಿಲೆಯು ಹಾರಿ ಬಂದು ಮಾಮರವನೇರಿತ್ತು. ಸಂತಸದ ವಸಂತಗಾನ ಮಾಡಿತ್ತು. ಭುವಿಯೆ ನಂದನವನವಾಗಿತ್ತು.

ಗುರುವು ಒಂದು ಮಾಮರದಂತೆ. ಸುಜ್ಞಾನದ ಚಿಗುರೊಡೆದು ಸ್ವಾನುಭಾವದ ಫಲ ಬಿಡಬೇಕು. ಆಗ ಎಲ್ಲಿಂದಲೋ ಒಬ್ಬ ಶಿಷ್ಯ ಕೋಗಿಲೆಯಂತೆ ಬರುವನು. ಆ ಪರಮಾನುಭವದ ಫಲವನುಂಡು ಮಹಾದಾನಂದಗೀತೆಯ ಪಾಡುವನು.

***ಗುರೋಸ್ತು ಮೌನಂ ವ್ಯಾಖ್ಯಾನಂ ಶಿಷ್ಯಸ್ತು ಛಿನ್ನಸಂಶಯಃ***

ಫಲಭರಿತ ಮಾಮರದಂತೆ ಪಕ್ವ ಹೃದಯದ ಗುರುವೂ ಮೌನವಾಗಿರಬಹುದು. ತಪೋನಿಧಿಯ ಆ ಮೌನವೇ ಮಹಾ ವಾಖ್ಯಾನವಾಗುತ್ತದೆ ಸತ್ಯದರ್ಶನಕ್ಕೆ. ಅಂತೆಯೇ ಪರಮಗುರುವಿನ ದರ್ಶನವಾಗುತ್ತಲೇ ಶಿಷ್ಯನ ಸಂಶಯಗಳೆಲ್ಲ ನಿರಸನವಾಗುತ್ತವೆ. ನಿಜಾನಂದವು ಸಮನಿಸುತ್ತದೆ.

ಬೆಟ್ಟದ ನೆಲ್ಲಿ ಉರುಳಿ ಸಮುದ್ರದ ದಂಡೆಯ ಕಂಡಿದೆ. ಸಮುದ್ರದ ಉಪ್ಪು ನೆಲ್ಲಿಯನ್ನು ಮುತ್ತಿಕೊಂಡಿದೆ. ಈಗ ಆ ನೆಲ್ಲಿಯನ್ನು ಸವಿದ ಮೀನಿನ ಸಂತಸಕ್ಕೆ ಸೀಮೆಯುಂಟೆ? ಗುರುಶಿಷ್ಯರೊಂದಾದ ಮೇಲೆ ಆತ್ಮಾನುಭವದ ಮಧುರತೆ ಗೊಂದು ಮೇರೆಯುಂಟೆ?

ಆ ಮಹಾಗುರುವಿನ ಮಹತಿಯನರುಪುವ ಒಂದು ಸುಂದರಘಟನೆ- ಅಲೆಗ್ಝಾಂಡರನು ಮೆಥೆಡೋನಿಯಾ ಪಟ್ಟಣದ ಮಹಾಪ್ರಭುವಾದ ಫಿಲಿಪ್ಸನ ಮಗ. ತಂದೆಯು ಮಗನಿಗೆ ಶೌರ್ಯ, ಧೈರ್ಯ, ಐಶ್ವರ್ಯವನ್ನೆಲ್ಲ ಕೊಟ್ಟು, ಬೆಳೆಸಿ, ರಾಜಗದ್ದುಗೆಯ ಮೇಲೆ ಕೂಡ್ರಿಸಿದ. ಅಲೆಗ್ಝಾಂಡರನು ಮಹಾಜ್ಞಾನಿ ಅರಿಸ್ಟಾಟಲನಿಗೆ ಶಿಷ್ಯನಾಗಿದ್ದ. ಗುರು ಅರಿಸ್ಟಾಟಲನಿಗೆ ಸಿರಿಸಂಪದವೇನಿಲ್ಲ, ಆತನ ಶಿಷ್ಯಸಮೂಹವೇ ಅವನ ಏಕೈಕ ಆಸ್ತಿ. ಆದರೂ ರಾಜನಿಗೆ ಗುರುವಿನಲ್ಲಿ ಅಪಾರಭಕ್ತಿ.

ಒಂದು ದಿನ ಅಲೆಗ್ಝಾಂಡರ್ ಮಹಾರಾಜನು ದಾರಿಯಲ್ಲಿ ನಡೆದಿದ್ದಾನೆ. ಮಧ್ಯದಲ್ಲಿ ಆತನ ಪರಮಗುರು ಅರಿಸ್ಟಾಟಲ್ ಭೇಟಿಯಾದ. ತಕ್ಷಣವೇ ಅಜೇಯ ದೊರೆ ಅಲೆಗ್ಝಾಂಡರನು ಮಂಡಿಯೂರಿ, ಗುರುವಿಗೆ ತಲೆಬಾಗಿದ. ಜನರು ಬೆರಗಾದರು! ರಾಜನ ವಂದನೆಯನ್ನು ವಿನಯದಿಂದ ಸ್ವೀಕರಿಸಿದ ಗುರು ಅರಿಸ್ಟಾಟಲ್ ಒಂದು ಶಬ್ದವೂ ಮಾತನಾಡದೆ ಹೊರಟು ಹೋದ.

ಆ ಬಳಿಕ ರಾಜನಿಗೆ ಮಂತ್ರಿ ಕೇಳಿದ, ''ಮಹಾಪ್ರಭು ! ತಾವು ಅಜೇಯವೀರರು, ನಿಮ್ಮ ತಂದೆ ನಿಮಗೆ ಸುಂದರ ದೇಹವನ್ನಿತ್ತು, ಯುದ್ಧಕಲೆಯನ್ನು ಕಲಿಸಿ ಬೆಳೆಸಿದ. ಸಮಸ್ತ ಐಶ್ವರ್ಯವನ್ನು ಕೊಟ್ಟು ನಿಮ್ಮನ್ನು ಏಕಛತ್ರಾಧಿಪತಿಗಳನ್ನಾಗಿ ಮಾಡಿದ. ಇಂಥ ತಂದೆಗಿಂತಲೂ ಹೆಚ್ಚಿನ ಗೌರವವನ್ನು ಈ ಭಿಕ್ಷುಕವೇಷದ ಬಡಗುರುವಿಗೆ ಕೊಡುವಿರಲ್ಲ, ಏಕೆ?''

ಆಗ ಅಲೆಗ್ಝಾಂಡರ್ ದೊರೆ ನೀಡಿದ ಉತ್ತರವನ್ನು ಸುವರ್ಣಾಕ್ಷರದಲ್ಲಿ ಬರೆದಿಡಬೇಕು.

''ನನ್ನ ತಂದೆ ನನ್ನನ್ನು ಸ್ವರ್ಗದಿಂದ ಈ ಭೂಮಿಗೆ ತಂದ. ಗುರುವು ನನ್ನನ್ನು ಈ ಭೂಮಿಯಿಂದ ಸ್ವರ್ಗದೆತ್ತರಕ್ಕೆ ಏರಿಸಿದ. ನನ್ನ ತಂದೆ ನನಗೆ ನಾಶವಾಗುವ ದೇಹವನ್ನು, ಸಂಪತ್ತನ್ನು ಕೊಟ್ಟ. ನನ್ನ ಗುರುವು ನನಗೆ ಅಮರಸಿರಿಯನ್ನು, ದಿವ್ಯ ಜೀವನವನ್ನು ಕರುಣಿಸಿದ. ಅಂಥ ಮಹಾಗುರುವನ್ನು ನಾನು ಹಾಗೆ ಗೌರವಿಸಿದೆ ಇರಬಹುದೆ?'' ಎಂದ ರಾಜ.

ಅಮೂಲ್ಯವಾದ ಆತ್ಮಜ್ಞಾನದ ರತ್ನವನ್ನು ಧರಿಸಿದವನು ಸದ್ಗುರುವು. ಆದ್ದರಿಂದಲೇ ರಾಜಾಧಿರಾಜನು ಈ ಸದ್ಗುರು ನಾಥನು. ಅನಾರೆಂಬುದನ್ನರಿಯಲು ಇಂಥಾ ವಿದ್ಯಾವಾರಿಧಿಯಾದ ಸದ್ಗುರುವನ್ನರಸಿಕೊಂಡು ಬರುತ್ತಾನೆ ಸಚ್ಛಿಷ್ಯನು.

(ಕೃಪೆ : ನಾನಾರು?)



# ಶ್ರೀ ಸಿದ್ಧಗಂಗಾ ಕ್ಷೇತ್ರ: ಪರಿಸರ ಮತ್ತು ಈಚಿನ ಶೋಧಗಳು

*(ಕಳೆದ ಸಂಚಿಕೆಯಿಂದ)*

– ಡಾ. ಎಂ.ಜಿ. ನಾಗರಾಜ್ *

**ಐತಿಹಾಸಿಕ ಕ್ಯಾತ್ಸಂದ್ರ ಪರಸರ :** ಬಹುಶಃ ಶಿವಶರಣ ಮೇದಾರ ಕೇತಯ್ಯನ ಸ್ಮರಣೆಗಾಗಿ 'ಕೇತಮಾರನಹಳ್ಳಿ' ಎಂದಿದ್ದುದು ಕೌತಮಾರನಹಳ್ಳಿ, ಗೌತಮಾರನಹಳ್ಳಿ ಎಂದು ಶಬ್ದಪಲ್ಲಟಗಳಾಗಿ ರೂಪುಗೊಂಡಿರುವಂತಿದೆ. ಅದಾಗಿ ಐತಿಹಾಸಿಕವಾಗಿ, ಧಾರ್ಮಿಕವಾಗಿ ಪ್ರಸಿದ್ಧಿಗೊಂಡಂಥ ಪ್ರದೇಶವಿದು. ಇದು ಹೊಯ್ಸಳರ ಕಾಲದಲ್ಲಿ 'ಆನೆಬಿದ್ದ' ಸರಿ ಎಂದು ಹೆಸರಾಗಿದ್ದ ದೇವರಾಯನ ದುರ್ಗ ಪ್ರದೇಶಕ್ಕೆ ಸಂಬಂಧಗೊಂಡು ಕೋಟೆಯನ್ನು ಹೊಂದಿದ್ದ ನೆಲೆ. ಹೀಗಾಗಿ ಕ್ರಿ.ಶ. ೧೨೬೯ರ ಹೊಯ್ಸಳ ವೀರನಾರಸಿಂಹದೇವರ ಕಾಲದ ಶಾಸನದ ರೀತ್ಯಾ (ಎ.ಕ. ೧೨, ರೈಸ್ – ತು.ಮು. ೪೯) ಕುಮಾರ ವೀರ ಚಿಕ್ಕಕೇತಯ್ಯ ದಂಡನಾಯಕನು ಆನೆಬಿದ್ದ ಸರಿಯನ್ನು ಆಳುತ್ತಿದ್ದನೆಂದರೆ ಅವನ ಆಳ್ವಿಕೆಯ ಪರಿಧಿಗೆ ಇದೂ ಸೇರಿದುದಾಗಿತ್ತು.

ಹೊಯ್ಸಳ ಆಳ್ವಿಕೆಯ ಕುರುಹೆಂಬಂತೆ ದೇವರಾಯ ಪಟ್ಟಣದ ಶಾಂತವೀರ ಮಹಾಸ್ವಾಮಿಗಳ ಮಠದ


ಕ್ಯಾತ್ಸಂದ್ರ ಊರ ಬಾಗಿಲ ಮಂಟಪದ ಎಂಟುಜಡೆ ಯತಿ ಮತ್ತು ಐದು ಜಡೆಯ ಶಿವಯೋಗಿ

ಸ್ತಂಭಶಿಲ್ಪವೊಂದು ಮಾನವ ಶರೀರ ಉಭಯ ಭೇರುಂಡ ಮೊಗದ ಸ್ತಂಭ ಶಿಲ್ಪವು ಕಾಣಬರುವುದಾಗಿದೆ. ಈ ಬಗೆಯ ಶಿಲ್ಪಗಳು ಚೆನ್ನಪಟ್ಟಣ ತಾಲ್ಲೂಕು ಮಳೂರು ಮತ್ತು ಮಾಗಡಿ ತಾಲ್ಲೂಕು ಕಲ್ಲೂರಿನಲ್ಲಿ ಹೊಯ್ಸಳರಾಳ್ವಿಕೆಯ ಶಾಸನ ಶಿಲ್ಪಗಳಲ್ಲಿ ಕಂಡುಬಂದಿವೆ. ಕ್ರಿ.ಶ. ೧೨೬೯ ರಿಂದ ೧೪೮೮ ರ ವರೆಗೂ 'ಕೇತಯ್ಯ ದಂಡನಾಯಕ' ಹೆಸರಿನೊಡನೆ ಆ ನಾಯಕ ಪರಂಪರೆ ಹರಿದುಬಂದಿದೆ. ಅದರ ಆರಂಭ ಕಾಣುವುದು ತುಮಕೂರು ಜಿಲ್ಲೆ ಕ್ಯಾತ್ಸಂದ್ರ (ಕೇತಸಮುದ್ರ) ಸಿದ್ಧಗಂಗಾ ಪರಿಸರದಲ್ಲಿಯೇ ಆಗಿದೆ. ಕಾಲಾಂತರದಲ್ಲಿ ಅವನ ಹೆಸರಿನಲ್ಲಿ ರೂಢಿಗೊಂಡು ಹಾಗೆ ಕರೆಸಿಕೊಂಡು ಶಾಸನ ಮತ್ತು ಸಾಹಿತ್ಯ ಮೂಲದಲ್ಲಿ ಕಾಣಬರುತ್ತದೆ. ಈ ಕೇತಸಮುದ್ರದಲ್ಲಿ ಚಿಕ್ಕಣ್ಣ ಸೆಟ್ಟಿ ಎಂಬ ವೀರಶೈವ ಶರಣ ದಾಸೋಹ ಸೇವೆಯಿಂದ ಪ್ರಸಿದ್ಧಿಗೊಂಡಿದ್ದ. ಇವನ ಅಸ್ತಿತ್ವಕ್ಕೆ ಸಾಕ್ಷಿಯಾಗಿ ಈಗಾಗಲೇ ಹೇಳಿರುವಂತೆ ಕ್ರಿ.ಶ. ಸು. ೧೫೮೦ ರ ವಿರೂಪಾಕ್ಷ ಪಂಡಿತನ ಚನ್ನಬಸವ ಪುರಾಣದಲ್ಲಿ ಇವನ ದಾಸೋಹದ ಬಗ್ಗೆ 'ಪರಮ ಜಂಗಮರನ್ನು ದಾಸೋಹಮಂ ಮಾಳ್ಪ ದೊರೆಗಳಂ ಕೇತಿಸಾಗರದ ಚಿಕ್ಕಣ್ಣಸೆಟ್ಟಿಗಳು ವಿಖ್ಯಾತಿ ವಿಜ್ಞಾವರದ ಪ್ರಭುವೆ ಚಿಕ್ಕಣ್ಣಗೌಡ....'

– ಎಂದು ವರ್ಣಿಸಿರುವಲ್ಲಿ ಚಿಕ್ಕಣ್ಣ, ಕ್ಯಾತ್ಸಂದ್ರದ ಒಬ್ಬ ಪ್ರಮುಖ ವೀರಶೈವ ನಾಯಕನೋ, ಅಧಿಕಾರಿಯೋ ಆಗಿದ್ದು, ಶರಣ ಕೈಂಕರ್ಯ ನಡೆಸುತ್ತಿದ್ದ ಬಗೆಗಿನ ಸೂಚನೆ ಆಗುತ್ತದೆ. ಇವನ ವಂಶಿಕರು ಈಗ ಕ್ಯಾತ್ಸಂದ್ರದ ಪಕ್ಕದ ಕಲ್ಲಹಳ್ಳಿಯಲ್ಲಿ ವಾಸವಿದ್ದಾರೆ. ಸಮಾಜದ ಯಜಮಾನಿಕೆ ಇದ್ದ ಕುರುಹಾಗಿ ದೇಶದ ಶೆಟ್ರು ಮನೆತನವೆಂದೇ ಇಂದಿಗೂ ಈ ಮನೆತನಕ್ಕೆ ರೂಢಿ ಇದೆ (ಚನ್ನಬಸವ ಶೆಟ್ಟಿ ಬಸವಲಿಂಗ ಶೆಟ್ಟಿ–ಚನ್ನಬಸವಶೆಟ್ಟಿ.... ಈ ಹೆಸರುಗಳು ಇವರಲ್ಲಿವೆ). ದಾಸೋಹ ಪ್ರಸಿದ್ಧಿಯ ಕಾರಣ ಕಣಜಕ್ಕೆ ಭತ್ತ, ರಾಗಿ ತುಂಬಿ ದಾಸೋಹಕ್ಕಾಗಿ ವಿನಿಯೋಗಿಸುತ್ತಿದ್ದರಂತೆ. ಅಂದರೆ ಶರಣಪರಂಪರೆಯು ಪ್ರಾಚೀನದಲ್ಲಿದ್ದುದು ಅದು ಮುಂದುವರಿದ ಸಂಕೇತವೆಂಬಂತಿದೆ. ಕ್ಯಾತ್ಸಂದ್ರ ಊರಬಾಗಿಲ ಪ್ರವೇಶ ಮಂಟಪದ ಭಿತ್ತಿಯಲ್ಲಿ ಎಂಟು ಜಡೆ ಗುಚ್ಛದ ವೀರಶೈವ ಯತಿ ಮತ್ತು ಐದು ಜಡೆಯ ಶಿವಯೋಗಿ ಇವರ ಉಬ್ಬು ಶಿಲ್ಪಗಳಿರುವುದು ಈ ಸಂದರ್ಭದಲ್ಲಿ ಗಮನಾರ್ಹವೆನಿಸುತ್ತದೆ.

*ನಂ. ೨೨೧, 'ಅನರ್ಘ್ಯ, ಶ್ರೀ ಜ.ಚ.ನಿ. ಕೃಪೆ' ೬೮ನೇ ಕ್ರಾಸ್, ೫ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-೫೬೦೦೧೦






ಶ್ರೀ ಸಿದ್ಧಗಂಗಾ ಮಠದ ವಜ್ರಮಹೋತ್ಸವ ಭವನದ ಹಿಂಬದಿಗಿರುವ ಬಿದಿರು ಗಿಡಗಳ ಬಳಿಯ ಮೇದ ಜನಾಂಗದ ಶ್ರೀ ಕೇತೇಶ್ವರ ಗುರುಮಠದಲ್ಲಿರುವ ದೇವತೆ ಕರಡಿಗೆ ಧಾರಿಣಿ ಕುಕ್ಕಾಡಮ್ಮನ ಶಿಲಾಮೂರ್ತಿ

ಈ ಕ್ಯಾತಸಂದ್ರ ಸಂಬಂಧವಾಗಿ ಮೇದ ಜನಾಂಗದ ಗುರುಮಠವೆಂದು ಶ್ರೀ ಕೇತೇಶ್ವರ ಮಹಾಮಠವೊಂದು ಯಜಮಾನ್ ಗಂಗ ಮಾಳಯ್ಯನವರ ನಿರ್ವಹಣೆಯಲ್ಲಿದೆ. ಕ್ಯಾತ್ಸಂದ್ರದಲ್ಲಿ ಅವರ ಬೀದಿಯಲ್ಲಿ ಹೀಗೆಯೇ (ಇಷ್ಟಲಿಂಗ), ಕರಡಿಗೆ ಧಾರಿಣಿ ಚೌಡೇಶ್ವರಿ, ಚಾಮುಂಡೇಶ್ವರಿ ದೇಗುಲಗಳೂ ಇವೆ. ಸಿದ್ಧಗಂಗಾ ಶ್ರೀ ವಜ್ರಮಹೋತ್ಸವ ಭವನದ ಹಿಂಬದಿಗೆ (ಕರಡಿಗೆ) ಲಿಂಗಧಾರಿಣಿ ಕುಕ್ಕಾಡಮ್ಮ* ಚಾಮುಂಡೇಶ್ವರಿ ವಿಗ್ರಹಗಳು ಸಪ್ತಮಾತ್ರಿಕಾ ಸಂಕೇತ ಶಿಲ್ಪಗಳೊಡನೆ ಸಾಂಕೇತಿಕ ಬಿದಿರು ದೇವರಕಾಡು ಸಹಿತ ಪೂಜೆಗೊಳ್ಳುತ್ತಿವೆ. ನವರಾತ್ರಿ, ಉಗಾದಿಯಲ್ಲಿ ಈ ದೇವತೆಗೆ ವಿಶೇಷ ಪೂಜೆಗಳುಂಟು. ಎಲೆ ಪೂಜೆಯೂ ಉಂಟು. ಮುಂದಿನ ಬಯಲಲ್ಲಿ ಈ ಕಾಡುದೇಗುಲಗಳೆದುರು ವಿಶಿಷ್ಟ ಆಸೀನ ಕಿರು ಶಿವರೂಪಿ ಮೇದಾರ ಕೇತಯ್ಯ(!)ನ ಶಿಲ್ಪವೊಂದಿದೆ.

(ಮೇದಾರ ಕೇತಯ್ಯ ಸ್ಮರಣಾರ್ಥ ಇಲ್ಲಿ ಪೂಜೆ ಇದೆ. ಹೀಗಾಗಿ ಶಿವಶರಣ ಮೇದಾರ ಕೇತಯ್ಯನ ತಪೋನುಷ್ಠಾನ ಕ್ಷೇತ್ರ ಎಂಬುದು ಇಲ್ಲಿಯ ಜನಪದ ಪರಂಪರೆಯಲ್ಲಿದೆ. ಅಂದರೆ ಕೇತಶರಧಿಗೆ ಐತಿಹಾಸಿಕವಾಗಿ, ಜಾನಪದೀಯವಾಗಿ ಈ ಎಲ್ಲ ಅಂಶಗಳೂ ಸಂಪರ್ಕಗೊಂಡಿವೆ ಎನ್ನಬೇಕು. ಈ ಹಿನ್ನೆಲೆಯಲ್ಲಿ ಕ್ಯಾತ್ಸಂದ್ರ ಒಂದು ಪ್ರಾಚೀನ ಶರಣ ಕ್ಷೇತ್ರವೆಂದೂ ಸಂಭಾವ್ಯಗೊಳ್ಳುತ್ತದೆ. ಇಲ್ಲವಾಗಿದ್ದರೆ ಕುಕ್ಕಾಡಮ್ಮ, ಚೌಡೇಶ್ವರಿಯರಿಗೆ ಕರಡಿಗೆ ಲಿಂಗಧಾರಣೆ ಈವರೆಗೆ ಹೇಗೆ ನಡೆದು ಬರುತ್ತಿತ್ತು.) ಬಹುಶಃ ಚಿಕ್ಕಣ್ಣಸೆಟ್ಟಿ ಈ ಪಾಳೆಪಟ್ಟಿನ ಆಳ್ವಿಕೆಗಿದ್ದನೆಂಬ ಸೂಚನೆ ಇದ್ದು, ಕ್ಯಾತ್ಸಂದ್ರದಲ್ಲಿ ಹಳೆಕೋಟೆ ಕೆಸರಮಡು ರಸ್ತೆ ಎಂದಿರುವುದೇ ಇದೊಂದು ಸಣ್ಣಪಾಳೆಯಪಟ್ಟು ಆಗಿತ್ತೆಂಬ ಸೂಚನೆ ಒದಗುತ್ತದೆ. ಇದರ ಅವಶೇಷವೆಲ್ಲ ಇಂದು ಚದುರಿ ನಿರ್ಲಕ್ಷವಾಗಿ ಬಿದ್ದಿವೆ.


ಕ್ಯಾತ್ಸಂದ್ರದ ಮೇದ ಜಾನಂಗೀಯರಲ್ಲಿ ಸಪ್ತಮಾತೃಕೆಯರ ವಿಗ್ರಹ ಸಹಿತಳಾದ ಚಾಮುಂಡೇಶ್ವರಿ ಪಾದ ಪೀಠದಲ್ಲಿ ಗಂಗಮಾರಯ್ಯನವರ ಹೆಸರು ಶಾಸನೋಕ್ತವಾಗಿದೆ.



ಕ್ಯಾತ್ಸಂದ್ರ – ಕೇತಶರಧಿ ಕೆರೆದಂಡೆ ಬದಿಗಿನ ದೊಡ್ಡಮಾರಮ್ಮ ಗುಡಿಯ ಹೊರಭಿತ್ತಿ ಬಳಿ ವಿಶೇಷ ಚಹರೆಯ ಶೂಲಧಾರಿ ವೀರ-ಮಾಸ್ತಿಗಲ್ಲುಗಳು ಮತ್ತು ಕೇತರಶರಧಿ

ಪರಂಪರೆಯ ದ್ಯೋತಕವಾಗಿದೆ.

ಕ್ಯಾತ್ಸಂದ್ರದಲ್ಲಿ 'ಹಿರಿಯಮಠ'ವಿದ್ದು, ಮಹಂತ ಮಠವೆಂದು ಕರೆಸಿಕೊಂಡಿದೆ. ಮಠದ ಶ್ರೀ ಕೆ.ಎಸ್. ರಾಜಪ್ಪನವರು ಇದನ್ನು 'ಅಕ್ಕಮ್ಮನಾಗತಿಕೆರೆ (ಲಕ್ಕಮ್ಮ ನಾಗತಿ ಕೆರೆ !) ಸ್ಥಳದ ಮಹತ್ತಿನ ಮಠ' ಎನ್ನುತ್ತಾರೆ. ಗದ್ದುಗೆ ಬಸವಣ್ಣ ಸ್ತಂಭದ ಮುಖದಲ್ಲಿ ಪ್ರಣಾಮಭಂಗಿಯ ಸ್ಥಾನಕ ಮೂರ್ತಿಯು ಶರಣ ನಮನ ಸಂಕೇತದಲ್ಲಿರುವಂತಿದೆ. (ಇದು ಅಕ್ಕನಾಗಮ್ಮನ ಸ್ಮರಣೆಯ ಸಂಕೇತವೆಂದರೆ ಕ್ಯಾತ್ಸಂದ್ರಕೆರೆ'ಯ ಮೊದಲಿನ ಹೆಸರು 'ಅಕ್ಕಮ್ಮನಾಗತಿ ಸ್ಥಳದ ಕೆರೆ' ಎಂದಿತ್ತೆ ? ಎಂಬ ಅನುಮಾನಕ್ಕೆ ಪುಟಗೂಡುತ್ತದೆ. ಹಾಗೂ ಸಿದ್ಧಗಂಗಾ ಪರಿಸರ ೧೨ನೇ ಶತಮಾನದಲ್ಲಿಯೆ ಶರಣರಿಗೆ ಪರಿಚಿತ ಸಿದ್ಧ ಪ್ರದೇಶವಾಗಿತ್ತೇ ಎಂಬ ಮಾತಿಗೆ ಅವಕಾಶ ನೀಡುವಂತಿದೆ. ಜನಪದ ರೂಢಿಯಲ್ಲಿ 'ಅಕ್ಕಮ್ಮನಾಗತಿ' ಎಂದು ರೂಢಿಗೊಂಡಿರ ಬಹುದು). ಈ ಬಗ್ಗೆ ಹೆಚ್ಚಿನ ವಿವರ ಮುಂದಿದೆ.

ಕ್ಯಾತ್ಸಂದ್ರದ ಗ್ರಾಮದೇವತೆ ಗುಂಡ್ಲಮ್ಮ ಐದು ಶಿಲಾ ಪತ್ರಿಕೆಗಳ ಸಮೂಹ ದೇವತೆ. ೧೮ ಹಳ್ಳಿಗಳಿಗೆ (ಬಹುಶಃ ೧೮ ಫಣಕಟ್ಟುಗಳ ಸಂಕೇತವೇ !) ಅಂದರೆ ಕ್ಯಾತ್ಸಂದ್ರ, ಮೈದಾಳ, ಮಂಚಲಕುಪ್ಪೆ, ಮಾಚನಹಳ್ಳಿ, ಬೊಮ್ಮನಹಳ್ಳಿ, ದೇವರಾಯಪಟ್ಟಣ, ಬಂಡೆಪಾಳ್ಯ, ಕಲ್ಲಳ್ಳಿ, ಕರಿಕಲ್ಲುಪಾಳ್ಯ, ಬಸವಾಪಟ್ಟಣ ಇತ್ಯಾದಿ ಗ್ರಾಮಗಳಿಗೆ ಈಕೆ ದೇವತೆ. ಈ ದೇವತೆಯ ಮೂಲ ಗುಡಿ ಕೇತಸಮುದ್ರ ಕೆರೆಯ ಪೂರ್ವದಂಡೆಗೆ ರೈಲುಹಳಿ ಸಮೀಪವಿದ್ದು, ವೀರಮಾಸ್ತಿ ಗಲ್ಲುಗಳನ್ನು ಹೊಂದಿದೆ. ಅವು ದೇಗುಲದ ಗೋಡೆಯ ಹೊರಭಾಗದಲ್ಲಿ ವಿಶಿಷ್ಟ ಚಹರೆಗಳ ವೀರಮಾಸ್ತಿ ಗಲ್ಲುಗಳಾಗಿವೆ. ವೀರಸತಿ ನಿಂಬೆಫಲ ಹಾಗೂ ಕನ್ನಡಿಗಳನ್ನು ಎರಡೂ ಹಸ್ತಗಳನ್ನೆತ್ತಿ ಹಿಡಿದಿರುವ ಭಂಗಿಯಲ್ಲಿದ್ದಾಳೆ. ಉಗಾದಿ ಆದ ತಿಂಗಳಿಗೆ ಈಕೆಗೆ ಮೂರು ದಿನದ ಜಾತ್ರೆ. ಈಕೆ ನೆಲೆದೇವರು ಎಂದು ಏಳು ಜನ ಅಕ್ಕತಂಗಿಯರನ್ನು ಪಟ್ಟಕ್ಕೆ ಕೂರಿಸುತ್ತಾರೆ. ವಿಶೇಷತಃ ಬಟ್ಟವಾಡಿಯ ಚೌಡೇಶ್ವರಿ ದೇವಿಯ ಕೀರಿಟದ ಮೇಲೆ ನಾಗರ ಹೆಡೆ ಅಲಂಕರಣ, ಗರ್ಭಗೃಹದ ಬಾಗಿಲ ಅಕ್ಕಪಕ್ಕದಲ್ಲಿ ದ್ವಾರಭದ್ರೆ ಸೂಚಿತ ಸ್ತಂಭಮೇಲಿನ ಸ್ತ್ರೀ ಶಿರಗಳ ರೂಪ, ಪ್ರಾಗೈತಿಹಾಸಿಕ ಪದ್ಧತಿ ಪ್ರಭಾವಿತವಾದದ್ದು, ದೇವಿಗುಡಿಯ ಮುಂದಿನ ಧ್ವಜಸ್ತಂಭದಲ್ಲಿ ಆಸೀನ ಸ್ತ್ರೀರೂಪ ಇತ್ಯಾದಿಗಳು ಈ ಪ್ರದೇಶದ ಶಾಕ್ತ



ಕ್ಯಾತ್ಸಂದ್ರ ಹಿರೇಮಠ ಗದ್ದುಗೆ ಬಸವಣ್ಣನ ಸ್ತಂಭಮುಖದಲ್ಲಿ ಸಮಭಂಗ ಸ್ಥಾನಕ ಪ್ರಣಾಮಿ ಮುದ್ರೆಯ ಶಿವಶರಣ (ಇರಿಭಕ್ತ ಮಾದರಿಯೆ?)







ಕ್ಯಾತ್ಸಂದ್ರ ಸೋಮೇಶ್ವರ ಗುಡಿ ವಿಮಾನ ಗೋಪುರ ಕೋಷ್ಠದಲ್ಲಿ ತೋಂಟದ ಸಿದ್ಧಲಿಂಗರ ಮತ್ತು ಒಳಾಂಗಣ ಸ್ತಂಭಶಿಲ್ಪದಲ್ಲಿ ಮತ್ಸೇಂದ್ರನಾಥ

ಇಲ್ಲಿಯ ರಾಮೇಶ್ವರ ದೇಗುಲದಲ್ಲಿ ಸೂರ್ಯ, ಶಿವಲಿಂಗ, ಸೀತಾ ರಾಮರ ವಿಗ್ರಹಗಳಿದ್ದು, ನವರಾತ್ರಿಯಲ್ಲಿ ದುರ್ಗಾ ಪೂಜೆಯು ನಡೆಯುತ್ತದೆ. ದೇಗುಲದ ಎದುರಿನ ಬಲಿಪೀಠದ ಮುಖದಲ್ಲಿ ಸಿಂಹಶಿಲ್ಪವಿದ್ದು, ಮೊದಲಿದ್ದ ದುರ್ಗಾಮೂರ್ತಿಯ ಪೀಠವನ್ನು ಸಂಕೇತಿಸುವಂತಿದೆ. ಇಲ್ಲಿಯ ಸೋಮೇಶ್ವರ ದೇಗುಲವು ಗದ್ದುಗೆ ಗರ್ಭಗೃಹವೆಂದು ತೋರಿದರೂ ಗೋಪುರ (ವಿಮಾನ) ಕೋಷ್ಠಗಳಲ್ಲಿ ವೀರಭದ್ರ, ಯಡಿಯೂರು ಸಿದ್ಧಲಿಂಗೇಶ್ವರ, ಬಸವಣ್ಣನ ಗಾರೆ ಅಚ್ಚಿನ ಶಿಲ್ಪಗಳಿವೆ. ಒಳಗಿನ ಸ್ತಂಭಗಳಲ್ಲಿ ಮತ್ಸೇಂದ್ರನಾಥನ ಶಿಲ್ಪವಿದ್ದು, ನಾಥಪಂಥೀಯ ಪ್ರಭಾವ ಸೂಚಿಯಾಗಿದೆ. ಒಟ್ಟಾರೆ ಸಮೂಹ ದೇಗುಲವಾಗಿ ೧೮ ಕೋಮುಗಳಿಗೆ ಸಂಬಂಧಿಸಿದುದು ಎಂಬುದು ದೇಶದ ಶೆಟ್ರು ಶಾಂತಪ್ಪನವರ ಅಂಬೋಣ. ಇದು ವೀರಶೈವ ಪರಂಪರೆಯ ಪ್ರಭಾವವೇ ಆಗಿದೆ.

ಕ್ಯಾತ್ಸಂದ್ರ – ಸಿದ್ಧಗಂಗಾ ಕ್ಷೇತ್ರದಲ್ಲಿ ರಾಮಲಿಂಗೇಶ್ವರ ಬೆಟ್ಟದ ಹಾದಿಗೆ ಸನಿಹವಾಗಿ ಕುಕ್ಕಾಡಮ್ಮ ದೇಗುಲವು ಬಿದಿರು ಗಿಡಗಳ ಕಟ್ಟೆ ಸಹಿತವಾಗಿ ಇದೆ. ಈ ಪ್ರದೇಶವೆಲ್ಲ ಮೊದಲಿಗೆ ಬಿದಿರು ಕಾಡಿಂದ ಕೂಡಿದ ಬಗ್ಗೆ ಜಾನಪದ ವಿದ್ವಾಂಸರಾದ ಶ್ರೀ ಎಚ್.ಎಸ್. ಸಿದ್ಧಗಂಗಪ್ಪನವರ ತಾತನವರಾದ ಶತಾಯುಷಿ ಬ್ಯಾತದ ಮರಿಯಪ್ಪ (ಈಗ ಲಿಂಗೈಕ್ಯ) ಹಾಗೂ ದೇವರಾಯಪಟ್ಟದ ಪಟೇಲ್ ಡಿ.ಆರ್. ಶಿವಕುಮಾರ ಅವರು ತಿಳಿಸಿದರು. ಮೊದಲಿಗೆ ಈ ಪ್ರದೇಶದಲ್ಲಿ ಮೇದ ಜನಾಂಗದ ವಾಸ್ತವ್ಯವೂ ಇದ್ದು ಈಗ ಕ್ಯಾತ್ಸಂದ್ರದ ಬೀದಿಯೊಂದು ಅವರ ವಾಸ್ತವ್ಯಕ್ಕೆ ಮೀಸಲಾಗಿದೆ. ಮೂಲದೇವರು ಕುಕ್ಕಾಡಮ್ಮ ಮಾತ್ರ ಬೆಟ್ಟದ ಬುಡದ ಸನಿಹಕ್ಕಿದೆ; (ಬಿದಿರು ಮೂಲವನ್ನು ಕುಕ್ಕಾಡಮ್ಮ ಹೆಸರಿನ ಅರ್ಥವೂ ಸಂಕೇತಿಸಿರುವಂತಿದೆ) ಬಿದಿರುಕಾಡಿನ ದೇವತೆಯೆಂದು ಜನಪದ ರೂಢಿಯಲ್ಲಿದೆ. ಈ ಪ್ರದೇಶ ಶಿವಶರಣ ಮೇದಾರ ಕೇತಯ್ಯನ ಅನುಷ್ಠಾನ ಕ್ಷೇತ್ರವೆಂದು ಸ್ಥಳೀಯ ಮೇದ ಜನಾಂಗದವರ ಪರಂಪರೆಯ ಕಥೆಯಲ್ಲಿದೆ. ಅವರಲ್ಲಿರುವ ಈ ಕುಕ್ಕಾಡಮ್ಮ ಮತ್ತು ಚೌಡೇಶ್ವರಿ ದೇವಿಯರಿಗೆ ಇಷ್ಟಲಿಂಗಧಾರಣೆಯಲ್ಲಿ (ಕರಡಿಗೆ) ಇಂದಿಗೂ ಪೂಜೆ ನಡೆಯುತ್ತಿರುವುದು ಸಾಂಕೇತಿಕವಾಗಿ ಶರಣ ಸಂಪ್ರದಾಯವನ್ನು ಸೂಚಿಸುವಂತಿದೆ. ಇನ್ನು ಕುಕ್ಕಾಡಮ್ಮ ದೇಗುಲದ ಎದುರು ಬಯಲಿನಲ್ಲಿ ಸನಿಹವಾಗಿ ಬಸವನಿಗೆ ಅಂಟಿದಂತೆ ಜಟಾ ಕಿರೀಟಧಾರಿ ದ್ವಿಬಾಹು ಶಿಲ್ಪವು ಆಸೀನ ಶಿಲ್ಪವಿದೆ. ಮುಖದ ಮೇಲೆ ದಟ್ಟಮೀಸೆ, ಬಲಗೈಯಲ್ಲಿ ಖಡ್ಗ, ಎಡಗೈಯಲ್ಲಿ ದುಂಡಾಕೃತಿಯ ಗುರಾಣಿ ಇರುವ ಆಸೀನ ಶಿಲ್ಪವಿದ್ದು ಬಸವನಿಗೆ ಅಂಟಿಕೊಂಡಂತಿದೆ. ಈ ಬಗೆಯ ಲಕ್ಷಣದ ಶಿಲ್ಪಗಳು ಶಿವಶಿಲ್ಪಗಳಲ್ಲಿ ಕಂಡುಬರುವುದಿಲ್ಲ.



ಕುಕ್ಕಾಡಮ್ಮನ ಗುಡಿ ಎದುರು ಖಡ್ಗ, ಗುರಾಣಿ ದಾರಿ ನಂದಿವಾಹನ ದ್ವಿಭುಜ ಶಿವ (ಮೇದಾರ ಕೇತಯ್ಯ)

ಬಹುಶಃ ಮೇದಾರ ಕೇತಯ್ಯ ಕಲ್ಯಾಣ ಕ್ರಾಂತಿಯ ನಂತರ ಚದುರಿಬಂದ ಶರಣರಂತೆ ತನ್ನ ಈ ನೆಲೆಗೆ ಬಂದು ಅನುಷ್ಠಾನ ಮಾಡಿದ ಎಂಬ ನಂಬಿಕೆ ಹಿನ್ನೆಲೆಗೆ ಮೇದ ಜನಾಂಗದವರು ರೂಪಿಸಿಕೊಂಡ ಮೇದಾರ ಕೇತಯ್ಯನ ಶಿಲ್ಪವು ಇದಾಗಿರಬಹುದು.

*(ಮುಂದುವರೆಯುತ್ತದೆ)*



# ಭಾರತದ ಸ್ವಾತಂತ್ರ್ಯೋತ್ಸವ - ಒಂದು ಅವಲೋಕನ

- ಡಾ. ಗೊ.ರು. ಚನ್ನಬಸಪ್ಪ *

**ಭಾ**ರತದ ಸ್ವಾತಂತ್ರ್ಯ ಹೋರಾಟ ಜಗತ್ತಿನ ಇತಿಹಾಸದಲ್ಲಿಯೇ ಒಂದು ಅದ್ಭುತ ಘಟನೆ. ಆ ಹೋರಾಟದ ನೆನಪೇ ಒಂದು ಸ್ಫೂರ್ತಿಯ ಕಿರಣ.

ಭಾರತದ ಮಾನವ ಲೋಕದ ಪುರಾತನ ಬೀಡು. ಪ್ರಾಚೀನ ಕಾಲದಿಂದ ವಿಶ್ವಕ್ಕೆ ಆಧ್ಯಾತ್ಮಿಕ ಮೌಲ್ಯದ ಅಮೃತ ಸಂದೇಶ ನೀಡುತ್ತ ಬಂದಿರುವ ಧರ್ಮಭೂಮಿ. ಶತಶತಮಾನಗಳ ಸಂಸ್ಕೃತಿಯ ಸಂಸ್ಕಾರದೊಡನೆ ರೂಪುಗೊಂಡ ರಸಪೂರ್ಣ ಜೀವನ ಭಾರತೀಯರದು.

ಭಾರತ ಭೌಗೋಳಿಕವಾಗಿ, ಪದ್ಧತಿ-ಪರಂಪರೆಗಳಿಂದಾಗಿ, ಹಂಗಾಮು, ಹವಾಮಾನಗಳಿಂದಾಗಿ ವೈವಿಧ್ಯದ ನೆಲ, ಹೌದು. ಆದರೆ ಆ ವೈವಿಧ್ಯತೆಯ ಮಧ್ಯೆ ಅಸದೃಶವಾದ ಏಕತಾನತೆ ಇಲ್ಲಿನ ವೈಶಿಷ್ಟ್ಯ.

ಇಂತಹ ಅನನ್ಯ ಹಿನ್ನೆಲೆಯನ್ನು ಪಡೆದ ಭಾರತ ದಾಸ್ಯಕ್ಕೆ ಒಳಗಾದುದು ಒಂದು ವಿಪರ್ಯಾಸ. ಕಾಲದ ಕೈತವಕ್ಕೆ ಸಿಕ್ಕಿ ವಿದೇಶಿಯರ ಕುತಂತ್ರಕ್ಕೆ ಬಲಿಯಾದುದು ಒಂದು ಕಹಿ ಪ್ರಸಂಗ.

ಸಮೃದ್ಧ ಭಾರತದ ಮೇಲೆ ಸಾಮ್ರಾಜ್ಯಶಾಹಿಗಳು ಕಣ್ಣು ಹಾಕಿದ ಕಥೆ ಕ್ರಿಸ್ತಪೂರ್ವ ೫೦೦ನೆಯ ವರ್ಷದಷ್ಟು ಹಿಂದಕ್ಕೆ ಹೋಗುತ್ತದೆ. ದರ್ಶಕನೆಂಬ ರಾಜ ಮಗಧ ರಾಜ್ಯ ಆಳುತ್ತಿದ್ದಾಗ ಇರಾನದ ಡೇರಿಯಸ್ ಹಿಂದೂಸ್ತಾನದ ಮೇಲೆ ದಾಳಿ ನಡೆಸಿದ. ಕ್ರಿ.ಪೂ. ೩೨೭ರಲ್ಲಿ ಅಲೆಕ್ಸಾಂಡರ್ ಪ್ರವೇಶಿಸಿದ. ಆನಂತರ ಹೂಣರು, ಕುಶಾನರು, ಶಕರು, ಯವನರು ಆಗಿಂದಾಗ ದಾಳಿ ನಡೆಸುತ್ತಲೇ ಬಂದರು.

ಆದರೆ ಭಾರತವು ಪರಕೀಯ ಆಡಳಿತದ ಪೂರ್ಣ ಬಿಸಿಯನ್ನು ಅನುಭವಿಸಿದ್ದು ಬ್ರಿಟಿಷರ ಆಡಳಿತದಲ್ಲಿ. ನಮಗೆಲ್ಲ ತಿಳಿದಂತೆ ಬ್ರಿಟಿಷರೇನೂ ತಮ್ಮ ತೋಳ್ಬಲದಿಂದ ಭಾರತವನ್ನು ಗೆಲ್ಲಲಿಲ್ಲ. ವ್ಯಾಪಾರದ ನೆಪದ ಮೇಲೆ ಬಂದ ಜನ ನಮ್ಮ ವ್ಯವಹಾರದಲ್ಲಿ ಕೈಹಾಕಿದರು. ವಾಣಿಜ್ಯ ಕಂಪನಿಯೊಂದು ವಿಶಾಲ ಭಾರತವನ್ನು ಆಳಿತು. ಬ್ರಿಟಿಷರು ಈಸ್ಟ್ ಇಂಡಿಯಾ ಕಂಪನಿಯನ್ನು ಸ್ಥಾಪಿಸಿದ್ದು ಇಲ್ಲಿಗೆ ಸರಿಯಾಗಿ ೨೮೦ ವರ್ಷಗಳ ಹಿಂದೆ.

ಅವರ ಚಲನವಲನಗಳು ವಾಸ್ತವವಾಗಿ ಭಾರತೀಯರಲ್ಲಿ ಒಂದು ರೀತಿಯ ಜಾಗೃತಿಯನ್ನು ಉಂಟು ಮಾಡಿದವೆಂದು ಹೇಳಬಹುದು. ಸರಿ, ಅಲ್ಲಲ್ಲಿ ಸ್ಥಳೀಯವಾಗಿ ಪ್ರತಿರೋಧ ಆರಂಭವಾಯಿತು. ಬ್ರಿಟಿಷರ ಆಳ್ವಿಕೆಯ ಆರಂಭದಲ್ಲಿ ಅಂತಹ ಪ್ರತಿರೋಧ ತಳೆದು ಹೋರಾಡಿದ ಮೊದಲಿಗರಲ್ಲಿ ಕರ್ನಾಟಕದ ಹೈದರ್-ಟಿಪ್ಪೂ ಸುಲ್ತಾನರು ಮತ್ತು ವೀರರಾಣಿ ಕಿತ್ತೂರು ಚನ್ನಮ್ಮ ಇದ್ದಾರೆಂಬುದು ಕನ್ನಡಿಗರ ಹೆಮ್ಮೆ.

ಗಾಂಧೀಜಿಯವರ ನೇತೃತ್ವದಲ್ಲಿ ಸ್ವಾತಂತ್ರ್ಯ ಚಳವಳಿ



* ಅಧ್ಯಕ್ಷರು, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ೮ನೇ ವಿಭಾಗ, ಜಯನಗರ, ಬೆಂಗಳೂರು-೭೦







ಬಾಲಗಂಗಾಧರ ತಿಲಕ್

ಭಾರತ ಸ್ವಾಂತ್ರ್ಯೇತಿಹಾಸವನ್ನು ಗಮನಿಸಿದಾಗ ಮೊದಲು ಸ್ಥಳೀಯವಾಗಿದ್ದ ಹೋರಾಟಕ್ಕೆ ಸಂಘಟನೆಯ ಸಾರ್ವತ್ರಿಕ ಸ್ವರೂಪ ಬಂದದ್ದು ೧೮೫೭ ರಲ್ಲಿ ನಡೆದ ದಂಗೆಯ ನಂತರ. ಅಲ್ಲಿಂದ ಮುಂದೆ ನಡೆದ ಹೋರಾಟ ಒಂದು ರೋಮಾಂಚಕಾರಿ ಚರಿತ್ರೆ.

೧೮೮೫ ರಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ರೂಪುಗೊಂಡ ಮೇಲೆ ಸ್ವಾತಂತ್ರ್ಯ ಹೋರಾಟದ ಸ್ವರೂಪ ಮತ್ತಷ್ಟು ಬದಲಾಯಿಸಿತು. ಸಮಗ್ರ ಭಾರತದ ಜೀವನ ವಾಹಿನಿಯೇ ಸ್ವಾತಂತ್ರ್ಯ ಗೀತೆ ಹಾಡತೊಡಗಿತು.

ಆ ನಂತರ ಬ್ರಿಟಿಷ್ ಆಳರಸರು ತಮ್ಮ ಕುತಂತ್ರಕ್ಕೆ ಮತ್ತಷ್ಟು ಚಾಲನೆ ಕೊಟ್ಟರು. ಆಯಕಟ್ಟು ನೋಡಿಕೊಂಡು ನಮ್ಮನ್ನು ಒಡೆದು ಆಳಲಾರಂಭಿಸಿದರು. ನಮ್ಮ ದೇಶದ ಕೆಲವು ದೌರ್ಬಲ್ಯಗಳೂ ಅವರ ರಾಜಕೀಯಕ್ಕೆ ಅನ್ನ ಒದಗಿಸಿದವು.

ಆದರೂ ಬಾಲಗಂಗಾಧರ ತಿಲಕ್, ಗೋಪಾಲ ಕೃಷ್ಣ ಗೋಖಲೆ, ಮಹದೇವ ಗೋವಿಂದ ರಾನಡೆ, ಮದನ ಮೋಹನ ಮಾಳವೀಯ, ಲಾಲಾ ರಜಪತರಾಯ್, ದಾದಾಬಾಯಿ ನವರೋಜಿ ಮೊದಲಾದ ದೇಶಭಕ್ತರು ರಾಷ್ಟ್ರಪುರುಷನನ್ನು ಹೊಡೆದೆಬ್ಬಿಸಿದರು. ಭಾರತ ಜನಕೋಟಿಯ ಹೃದಯದಲ್ಲಿ ಸ್ವಾತಂತ್ರ್ಯದ ಕಿಡಿಯನ್ನು ಪ್ರಜ್ವಲಗೊಳಿಸಿದ ಮಹಾತ್ಮ ಗಾಂಧಿಯಂತೂ ಈ ಯುಗ ಮರೆಯಲಾಗದ ಮಹಾಶಕ್ತಿ!

ಭಾರತ ಸ್ವಾತಂತ್ರ್ಯ ಹೋರಾಟದಲ್ಲಿ ಸಾವಿರ ಸಾವಿರ ಸ್ಮರಣೀಯ ಘಟನೆಗಳು ನಡೆದಿವೆ. ಅವುಗಳಲ್ಲಿ ನಮ್ಮ ಗುಡ್ಡಗಾಡುಗಳಲ್ಲಿ ನಡೆದ ಹೋರಾಟಗಳಂತೂ ಸ್ಮರಣೀಯ. ರಾಂಪಾಗುಡಂ, ಬಸ್ತಾರ್, ಕೊಂಡ, ಮಯೂರ್‌ಭಂಜ್, ಬರ್ಸಾ ಮುಂಡ, ತಾನಾಭಗತ್, ಮಣಿಪುರ, ಬಿಲ್, ಮೊರ್ಲಿ ಮೊದಲಾದ ಪ್ರತಿರೋಧಗಳು ಅಸಾಮಾನ್ಯವಾದವು.

ಭಾರತ ಸ್ವಾತಂತ್ರ್ಯ ಸಾಧನೆಗೆ ಅಲಿಘರ್, ಅಸ್ಸಾಂ, ಬಿಹಾರ, ಬಂಗಾಳ, ಗುಜರಾಜ್ ಚಳುವಳಿಗಳು, ಬಾರ್ಡೋಲಿ, ಚಂಪಾರಣ್ಯ, ರೌಲತ್ ಸತ್ಯಾಗ್ರಹಗಳು, ದಂಡಿಯಾತ್ರೆ, ಉಪ್ಪಿನ ಸತ್ಯಾಗ್ರಹ ಮತ್ತು ಧ್ವಜಸತ್ಯಾಗ್ರಹಗಳು, ರೈತ ಚಳುವಳಿಗಳು ಹೀಗೆ ಸಹಸ್ರಾರು ಸಂಘಟನೆಗಳು ತಮ್ಮ ಪಾಲಿನ ಕಾಣಿಕೆ ಸಲ್ಲಿಸಿವೆ.

ಹಾಗೆಯೇ, ಯಂಗ್ ಇಂಡಿಯಾ, ಆಗಸ್ಟ್ ಬೇಡಿಕೆ, **'ವಂದೇ ಮಾತರಂ'** ಗೀತೆ, ಸ್ವದೇಶಿ ಚಳುವಳಿ, ಅಸಹಕಾರ ಚಳುವಳಿ, ವಿದೇಶಿ ಬಹಿಷ್ಕಾರ, ಗೋಸಂರಕ್ಷಣೆ, ಮಹಾರಾಷ್ಟ್ರದ ಗಣಪತಿ ಉತ್ಸವ, ಗಿರಣಿ ಕಾಮಗಾರ ಸಂಘಟನೆ, ನೌಜವಾನ್ ಭಾರತ್ ಸಭಾ, ಪ್ರಾರ್ಥನಾ ಸಮಾಜ, ಪ್ರಜಾ ಚಳುವಳಿ, ಆತ್ಮಗೌರವ ಚಳುವಳಿ, ಪ್ರಗತಿಪರ ಬರೆಹಗಾರರ ಸಂಘ - ಇಂತಹ ಸಂಘಟನೆಗಳ ಕೊಡುಗೆಯೇನೂ ಸಾಮಾನ್ಯವಾದುದಲ್ಲ.

ಇನ್ನು ಸ್ವಾತಂತ್ರ್ಯ ಹೋರಾಟದಲ್ಲಿ ಕರ್ನಾಟಕ ತನ್ನದೇ ಆದ ಕಾಣಿಕೆ ಸಲ್ಲಿಸಿದೆ.

ಕರ್ನಾಟಕದಲ್ಲಿ ಅಸಹಕಾರ ಚಳುವಳಿ ಮೊದಲು ಆರಂಭವಾದದ್ದು ಉತ್ತರ ಕನ್ನಡ ಜಿಲ್ಲೆಯ ಸಿರ್ಸಿ-ಸಿದ್ಧಾಪುರದ ಅರಣ್ಯ ಸತ್ಯಾಗ್ರಹದ ಮೂಲಕ.

೧೯೨೦ ರಲ್ಲಿ ನಡೆದ ನಾಗಪುರ ಕಾಂಗ್ರೆಸ್ ಅಧಿವೇಶನಕ್ಕೆ ಕರ್ನಾಟಕದಿಂದ ೮೦೦ ಪ್ರತಿನಿಧಿಗಳು ಹೋಗಿದ್ದಾರೆ.

ಮಂಡ್ಯ ಜಿಲ್ಲೆ ಮದ್ದೂರು ತಾ॥ ಶಿವಪುರದಲ್ಲಿ ನಡೆದ ಧ್ವಜ ಸತ್ಯಾಗ್ರಹ ನೆನಪಿನ ಸ್ಮಾರಕ ವೀರಸೌಧ.

ಕರ್ನಾಟಕದ ಮೂಲೆ ಮೂಲೆಯಲ್ಲಿ ನಡೆದ ಅಹಿಂಸಾತ್ಮಕ ಹೋರಾಟಗಳಲ್ಲಿ ಇಲ್ಲಿ ಸ್ಮರಣೆ ಮಾಡಿಕೊಳ್ಳುವ ಮೂರು ಘಟನೆಗಳೆಂದರೆ – ಒಂದು ಉತ್ತರ ಕನ್ನಡ ಜಿಲ್ಲೆಯ ಅಂಕೋಲ; ಇನ್ನೊಂದು ಕೋಲಾರ ಜಿಲ್ಲೆಯ ವಿದುರಾಶ್ವತ್ಥ, ಮತ್ತೊಂದು ಮಂಡ್ಯ ಜಿಲ್ಲೆಯ ಶಿವಪುರ.

ಸುಪ್ರಸಿದ್ಧ ದಂಡಿ ಸತ್ಯಾಗ್ರಹವಾದ ಒಂದು ವಾರದಲ್ಲಿ ಕರ್ನಾಟಕದಲ್ಲಿ ನಡೆದ ಪ್ರಮುಖ ಘಟನೆಯೆಂದರೆ ಉತ್ತರ ಕನ್ನಡ ಜಿಲ್ಲೆಯ ಅಂಕೋಲಾ-ಉಪ್ಪಿನ ಸತ್ಯಾಗ್ರಹ. ೧೯೩೦ರ ಏಪ್ರಿಲ್ ೧೩ ರಂದು ಸುಮಾರು ೩೦೦೦೦ ಕ್ಕೂ ಹೆಚ್ಚು ಜನ ಅಂಕೋಲೆಯ ಬಳಿ ಪೂಜಗೇರಿಯಲ್ಲಿ ಸೇರಿತ್ತು. ಈ ಸತ್ಯಾಗ್ರಹ ಸತತವಾಗಿ ೪೫ ದಿನಗಳ ಕಾಲ ನಡೆಯಿತು. ಬ್ರಿಟಿಷರ ಉಪ್ಪಿನ ಶಾಸನವನ್ನು ಉಲ್ಲಂಘಿಸಿ ಅಂಕೋಲೆಯಲ್ಲಿ ಉಪ್ಪಿನ ಸಂತೆಯನ್ನೇ ನಡೆಸಿದ್ದು ಭಾರತದಲ್ಲೇ ವಿಶಿಷ್ಟವಾದ ದಾಖಲೆಯಾಗಿತ್ತು. ಈ ಸತ್ಯಾಗ್ರಹದಲ್ಲಿ ಬಂಧನಕ್ಕೊಳಗಾದ ಮೊದಲಿಗರು ಎಂ.ಪಿ. ನಾಡಕರ್ಣಿ ಮತ್ತು ಸ್ವಾಮಿ ವಿವೇಕಾನಂದ ಅವರು.

ದಿನಾಂಕ ೧೦-೪-೧೯೩೮ ರಲ್ಲಿ ಮಂಡ್ಯ ಜಿಲ್ಲೆ ಮದ್ದೂರು ತಾಲ್ಲೂಕು ಶಿವಪುರದ ಬಳಿ ನಡೆದ ಧ್ವಜ ಸತ್ಯಾಗ್ರಹ ಕರ್ನಾಟಕದ ಸ್ವಾತಂತ್ರ್ಯ ಹೋರಾಟದ ಇನ್ನೊಂದು ದಾಖಲೆ. ಆಗಿನ ಮೈಸೂರು ಸರಕಾರದ ನಿಷೇಧಾಜ್ಞೆಯನ್ನು ಧಿಕ್ಕರಿಸಿ ಶಿವಪುರದಲ್ಲಿ ರಾಜ್ಯ ಮಟ್ಟದ ಕಾಂಗ್ರೆಸ್ ಅಧಿವೇಶನ ನಡೆಸಲಾಯಿತು. ಹೆಚ್.ಕೆ. ವೀರಣ್ಣಗೌಡರು ನೇತೃತ್ವ ವಹಿಸಿದ್ದರು. ಮೊದಲ ದಿನ ಧ್ವಜಾರೋಹಣ ಮಾಡಿದ ಟಿ.ಸಿದ್ದಲಿಂಗಯ್ಯ ನವರನ್ನು ಬಂಧಿಸಲಾಯಿತು. ಎರಡು ವಾರಗಳ ಕಾಲ ನಡೆದ ಈ ಧ್ವಜ ಸತ್ಯಾಗ್ರಹದಲ್ಲಿ ಅನೇಕ ಜನ ಬಂಧನಕ್ಕೊಳಗಾದರು.

ರಾಜ್ಯದಲ್ಲಿ ನಡೆದ ಅತ್ಯಂತ ದುರಂತ ಘಟನೆಯೆಂದರೆ ಕೋಲಾರ ಜಿಲ್ಲಾ ಗೌರಿಬಿದನೂರು ತಾಲ್ಲೂಕು ವಿದುರಾಶ್ವತ್ಥದಲ್ಲಿ.

೧೯೩೮ ರ ಏಪ್ರಿಲ್ ೨೫ ರಂದು ವಿದುರಾಶ್ವತ್ಥದಲ್ಲಿ ಸ್ಥಳೀಯ ದೇವರ ಜಾತ್ರೆ, ಜಾತ್ರೆಗೆ ಬಂದಿದ್ದ ಸಹಸ್ರ ಜನ ಅಲ್ಲಿ ಪ್ರದೇಶ ಕಾಂಗ್ರೆಸ್ ಏರ್ಪಡಿಸಿದ್ದ ಸಾರ್ವಜನಿಕ ಸಭೆಯಲ್ಲಿ ಪಾಲುಗೊಂಡಿತು. ಆ ಬೃಹತ್ ಸಂಘಟನೆಯನ್ನು ಚದುರಿಸಲು ಪೊಲೀಸರು ೯೬ ಸುತ್ತು ಗುಂಡು ಹಾರಿಸಿದರು. ಸುಮಾರು ೩೫-೪೦ ಜನ ಗುಂಡಿಗೆ ಬಲಿಯಾದರು; ನೂರಾರು ಜನ ಗಾಯಗೊಂಡರು. ಅನೇಕ ಜನ ಬಂಧನಕ್ಕೆ ಒಳಗಾದರು.

ಅದುವರೆಗೆ ಮೈಸೂರು ಮಹಾರಾಜರ ಆಡಳಿತದ ಬಗ್ಗೆ ಸಮಾಧಾನ ಹೊಂದಿದ್ದ ಗಾಂಧೀಜಿಯವರು, ವಿದುರಾಶ್ವತ್ಥದ ಘಟನೆ ಕೇಳಿ, ಮಹದೇವ ದೇಸಾಯಿ ಮತ್ತು ಆಚಾರ್ಯ ಕೃಪಲಾನಿಯವರನ್ನು ಮೈಸೂರಿಗೆ ಕಳುಹಿಸಿ ಖುದ್ದು ಮಾಹಿತಿ ಪಡೆದರು. ಆಗ ದಿವಾನರಾಗಿದ್ದ ಮಿರ್ಜಾ ಇಸ್ಮಾಯಿಲ್ ಅವರು ಕೃಪಲಾನಿ ಅವರೊಂದಿಗೆ ಒಂದು ಒಪ್ಪಂದಕ್ಕೆ ಬಂದರು. ಮೈಸೂರು ಧ್ವಜದೊಂದಿಗೆ ರಾಷ್ಟ್ರೀಯ ತ್ರಿವರ್ಣ ಧ್ವಜವನ್ನು ಹಾರಿಸಲು ಒಪ್ಪಿಕೊಂಡರು.





ಕೋಲಾರ ಜಿಲ್ಲೆ ಗೌರಿಬಿದನೂರು ತಾ॥ ವಿದುರಾಶ್ವತ್ಥದಲ್ಲಿ ನಡೆದ ದುರಂತ ಘಟನಾ ಸ್ಥಳ

ಕರ್ನಾಟಕದ ಶಿವಮೊಗ್ಗ ಜಿಲ್ಲಾ ಈಸೂರಿನಲ್ಲಿ ನಡೆದ ಘಟನೆಯೂ ಅಷ್ಟೇ ದುರಂತಕರ. ಸ್ವಾತಂತ್ರ್ಯದ ಬೆಂಕಿಯೊಡನೆ ಸರಸವಾಡಿದ ಕೆಲವು ಅಧಿಕಾರಿಗಳು ಆ ಬೆಂಕಿಯಲ್ಲೇ ಭಸ್ಮವಾಗಬೇಕಾಯಿತು. ಆದರೆ ಹಳ್ಳಿಯ ೫ ಜನ ಗಲ್ಲಿಗೇರಿದರು.

ಹೀಗೆ ಭಾರತ ತನ್ನ ನಿರಂತರ ಹೋರಾಟದಿಂದ ಸ್ವಾತಂತ್ರ್ಯ ಗಳಿಸಿತು. ೧೯೪೭ನೇ ಆಗಸ್ಟ್ ೧೫ ಭಾರತದ ಇತಿಹಾಸದಲ್ಲಿ ಸ್ಮರಣೀಯ ದಿನ. ಅಷ್ಟೇ ಏಕೆ, ಇಡೀ ವಿಶ್ವದ ಇತಿಹಾಸದಲ್ಲೇ ಭಾರತದಂತಹ ಬೃಹತ್ ರಾಷ್ಟ್ರ ಅಹಿಂಸಾತ್ಮಕ ಹೋರಾಟದಿಂದ ಸ್ವತಂತ್ರ ಗಳಿಸಿದ್ದು ಅದೇ ಮೊದಲು.

ವೀರರಾಣಿ ಕಿತ್ತೂರು ಚನ್ನಮ್ಮ

ಕವಿವಾಣಿ ಹೇಳುವಂತೆ –

*ಅಸ್ತಿಪಂಜರಗಳಲಿ ಮತ್ತೆ ಚೇತನ ತುಂಬಿಕೊಂಡಿತು*
*ಆತ್ಮಗೌರವ ಹೊಮ್ಮಿ ಬಂದಿತು*
*ಮಣ್ಣ ದೇಹಿಗಳೆಲ್ಲ ವಜ್ರದೇಹಿಗಳಾಗಿ ಹೋರಾಡಿ*
*ಮಾತೃಭೂಮಿಯ ಸೇವೆ ಸಲ್ಲಿಸಿದರು.*

ಯುಗದ ಮಹಾಚೇತನವಾಗಿ ಎದ್ದುನಿಂತ ಮಹಾತ್ಮಗಾಂಧಿ ರಾಷ್ಟ್ರಕ್ಕೆ ಬಂದ ಸ್ವಾತಂತ್ರ್ಯಕ್ಕೆ ಒಂದು ಅರ್ಥ ಕೊಡಬೇಕೆನ್ನುವಷ್ಟರಲ್ಲೇ ನಮ್ಮಿಂದ ದೂರ ವಾದುದು ದುರಾದೃಷ್ಟಕರ.

ಮಹಾಕವಿ ಕುವೆಂಪು ಹೇಳುವಂತೆ –

*ರಾಷ್ಟ್ರಪಿತ ದಿವಂಗತ, ಉನ್ನತ್ತ ಹಸ್ತಹತ*
*ನರಹೃದಯದ ವಿಷವಾರ್ಧಿಗೆ ಜೀವಾಮೃತ ಸಮರ್ಪಿತ*
*ಕ್ಷಮಿಸು ಓ ಜಗತ್ಪಿತ, ಅದೃಷ್ಟಹೀನ ಭಾರತ !*

ಆದರೆ ಬಾಪುವಿನ ಆದರ್ಶದ ಸ್ವತಂತ್ರ ಭಾರತ ನಿರ್ಮಾಣದಲ್ಲಿ ನಾವು ನಡೆಯಬೇಕಾದ ದಾರಿಯ ದೂರ ಇನ್ನೂ ಇದೆ.

ಭಾರತ ಸ್ವಾತಂತ್ರ್ಯ ಮರಳ ರಾಶಿಯ ಮೇಲೆ ನಿಲ್ಲಿಸಿದ ಮಣ್ಣಿನ ಮನೆಯಲ್ಲ; ತ್ಯಾಗ ಬಲಿದಾನಗಳ ವಜ್ರಗಾರೆಯ ಮೇಲೆ ನಿರ್ಮಿಸಿರುವ ಭದ್ರ ಕೋಟೆ. ೭೦ನೆಯ ಸ್ವಾತಂತ್ರೋತ್ಸವ ಆಚರಿಸುತ್ತಿರುವ ನಾವು ನಮ್ಮ ಹಿರಿಯರು ಪಟ್ಟಶ್ರಮ, ಮಾಡಿದ ತ್ಯಾಗ, ಅನುಭವಿಸಿದ ನೋವುಗಳನ್ನು ಮರೆಯಬಾರದು. ಅಂತಹ ನೆನಪು ನಮ್ಮ ಮುಂದಿನ ಹಾದಿಯನ್ನು ಕಂಡುಕೊಳ್ಳಲು ನೆರವಾದೀತು.

ಸ್ವಾತಂತ್ರ್ಯವನ್ನು ಗಳಿಸಲು ನಡೆಸಿದ ಹೋರಾಟಕ್ಕಿಂತಲೂ ಅದನ್ನು ಉಳಿಸಿಕೊಳ್ಳಲು ಹೆಚ್ಚಿನ ಹೋರಾಟ ಬೇಕಾಗುತ್ತದೆ. ಏಕೆಂದರೆ 'ಸ್ವಾತಂತ್ರ್ಯ' ಎನ್ನುವುದು ಅನುಪಮವಾದ, ಅಮೂಲ್ಯವಾದ 'ಜೀವರತ್ನ'.

'ನಾಡ ಮಕ್ಕಳ ಗಂಟಲೊತ್ತಿಕ್ಕಿ, ಮಾನವೀಯತೆಗೆ ಗುಂಡಿಕ್ಕಿ, ಗಹಗಹಿಸಿ ನಕ್ಕ ಬ್ರಿಟಿಷ್ ಸಾಮ್ರಾಜ್ಯಶಾಹಿ ರಕ್ಕಸನನ್ನು ಹೆಡಮುರಿ ಬಿಗಿದು ಕುಕ್ಕರಿಸಿದ' ದಿಟ್ಟತನ ಇಂದು ನವಭಾರತ ನಿರ್ಮಾಣದಲ್ಲೂ ತೊಡಗ ಬೇಕಾಗಿದೆ. ನಮ್ಮ ನರನರವೂ ಹೊಸ ನೆತ್ತರಿನ ತುತ್ತೂರಿ ಯನ್ನು ನುಡಿಸಬೇಕಾಗಿದೆ !



# ಬಸವಣ್ಣ – ಪ್ರಸ್ತುತತೆ

ಡಾ. ಸಿ.ಪಿ. ಕೃಷ್ಣಕುಮಾರ್ *

ಮಹಾತ್ಮ ಬಸವಣ್ಣನವರು ಕಟ್ಟಬಯಸಿದ್ದು ಸರ್ವಶೋಷಣೆ ಗಳಿಂದಲೂ ಮುಕ್ತವಾದ, ಸ್ವಾತಂತ್ರ್ಯ ಸಮಾನತೆ ಸೌಹಾರ್ದಗಳ ಅಡಿಗಲ್ಲಿನ ಮೇಲೆ ನಿಂತ, ಸರ್ವೋದಯ ನಿಷ್ಠವಾದ ಒಂದು ಆದರ್ಶ ಸಮಾಜವನ್ನು. ಅವರು ಈ ನೆಲದ ಮೇಲೆ ನಡೆದಾಡಿ ಸುಮಾರು ಎಂಟುನೂರು ವರ್ಷಗಳು ಆಗಿಹೋದುವು. ಅವರು ಕಲ್ಪಿಸಿಕೊಂಡು ಕಟ್ಟಬಯಸಿದ ಸಮಾಜ ಇಂದಿಗೂ ಸಂಪೂರ್ಣವಾಗಿ ಅಸ್ತಿತ್ವಕ್ಕೆ ಬಂದಿಲ್ಲ ವೆಂಬುದನ್ನು ಗಮನಿಸಿದಾಗ, ಅಷ್ಟು ಹಿಂದೆಯೇ ಅವರು ಕಂಡ ಕನಸು ಮತ್ತು ಅದನ್ನು ನನಸು ಮಾಡಲು ನಡೆಸಿದ ಹೋರಾಟ ಎಷ್ಟು ದೊಡ್ಡವೆಂಬುದು ಅರಿವಾಗದಿರದು. ಸಮತಾವಾದ, ಸಮಾಜವಾದ, ಪ್ರಜಾಪ್ರಭುತ್ವ ಮುಂತಾದುವು ಈ ಯುಗದ ಮೌಲ್ಯಗಳೆಂಬುದು ಎಲ್ಲರಿಗೂ ಗೊತ್ತು; ಆದರೆ ೧೨ನೆಯ ಶತಮಾನದಲ್ಲೆ ಬಸವಣ್ಣನವರು ಈ ಮೌಲ್ಯಗಳ ಸಾಕ್ಷಾತ್ಕಾರಕ್ಕಾಗಿ ಸತತ ಶ್ರಮಿಸಿದವರೆಂಬುದನ್ನು ನಾವು ಹೇಗೆ ಮರೆಯಬಹುದು? ಆ ಶ್ರಮ ಶಾಶ್ವತವಾಗಿ ಸಾರ್ಥಕವಾಗಲಿಲ್ಲವೆಂಬ ಮಾತು ಬೇರೆ. ಎಲ್ಲ ಮಹಾಪುರುಷರ ಪಾಡೂ ಅಷ್ಟೇ ತಾನೆ.

ಬಸವಣ್ಣನವರು ನಡೆಸಿದ ಕ್ರಾಂತಿ ನಮಗೆ ಇನ್ನಿಬ್ಬರು ಮಹಾಪುರುಷರನ್ನು ನೆನಪಿಗೆ ತರುತ್ತದೆ: ಪ್ರಾಚೀನ ಕಾಲದ ಬುದ್ಧ ಮತ್ತು ಅರ್ವಾಚೀನ ಕಾಲದ ಗಾಂಧೀಜಿ. ಇವರ ಕಾರ್ಯರಂಗ ಅಖಿಲ ಭಾರತ ವ್ಯಾಪ್ತಿಯದಾದರೆ ಬಸವಣ್ಣನವರದು ಕರ್ಣಾಟಕಕ್ಕೆ ಸೀಮಿತವಾಗಿತ್ತು. ಆದರೆ ತಮಗಿಂತ ಹಿಂದಿದ್ದ ಬುದ್ಧ ಮತ್ತು ಮುಂದೆ ಬಂದ ಗಾಂಧೀಜಿ ಇಬ್ಬರಿಗೂ ನಡುವೆ ನಿಂತು ಬಸವಣ್ಣನವರು ಅವರಿಬ್ಬರಿಗಿಂತಲೂ ಪರಿಪೂರ್ಣವಾದ ರೀತಿಯಲ್ಲಿ ಸಮಾಜವನ್ನು ಕಟ್ಟಲೆಳಸಿದ್ದರೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಅವರು ಕೊಡುವ ಸಮಾಜದ ಚಿತ್ರ ಹೆಚ್ಚು ಪ್ರಗತಿಪರವೂ ಅಂತೆಯೆ ಸಮನ್ವಯಶೀಲವೂ ಆಗಿದೆ. ಇಹ–ಪರಗಳ ಸಮನ್ವಯ, ಪರಂಪರೆ–ನವ್ಯತೆಗಳ ಸಮನ್ವಯ ಅವರ ವಿಚಾರಧಾರೆಯಲ್ಲಿ ಮತ್ತು ಅವರು ನಡೆದ ದಾರಿಯಲ್ಲಿ ಎದ್ದುಕಾಣುತ್ತದೆ. ಈ ಬಸವ ಸಾಧನೆ ಕರ್ಣಾಟಕದ ಪಾಲಿನ ಹೆಮ್ಮೆ; ಜಗತ್ತಿಗೇ ನಾವು ಎತ್ತಿತೋರಿಸ ಬಹುದಾದ ಬಾವುಟ.

ಬಸವಣ್ಣನವರ ಕನಸಿನ ಸಮಾಜ ಲೌಕಿಕ (Secular)ವಾದುದಲ್ಲ, ಧರ್ಮದ ತಳಹದಿಯ ಮೇಲೆ ರೂಪುಗೊಂಡದ್ದು ಎಂಬುದನ್ನು ಮುಖ್ಯವಾಗಿ ಲಕ್ಷಿಸಬೇಕು. ಆದರೆ ಧರ್ಮದ ಹೆಸರಿನಲ್ಲಿ ನಡೆಯುವ ಅನೇಕ ಅನಾಹುತಗಳಿಗೆ, ಅನಾಚಾರಗಳಿಗೆ, ಅನ್ಯಾಯ ಸುಲಿಗೆ ಶೋಷಣೆಗಳಿಗೆ ಅದರಲ್ಲಿ ಅವಕಾಶವಿಲ್ಲ. ಅಂಥ ಅನಿಷ್ಟಗಳ ಬುಡಕ್ಕೇ ಕೊಡಲಿ ಪೆಟ್ಟು ಹಾಕುವ ಜ್ವಲಂತ ವೈಚಾರಿಕ ಪ್ರವೃತ್ತಿಯನ್ನು ಬಸವಣ್ಣನವರಲ್ಲಿ ಕಾಣುತ್ತೇವೆ.

ಸಾಮಾನ್ಯ ಜನತೆಯನ್ನು ಉದ್ಧಾರೋನ್ಮುಖ ವಾಗಿಸಬೇಕಾದರೆ, ಅವರಿಗೆ ಅರ್ಥವಾಗುವ ಭಾಷೆಯಲ್ಲಿ ವಿಷಯಗಳನ್ನು ತಿಳಿಸಬೇಕು ಎಂಬುದನ್ನು ಕಂಡು ಕೊಂಡು, ಆ ದಿಶೆಯಲ್ಲಿ ಕೆಲಸ ಮಾಡಿದ್ದು ವಚನಕಾರರ ಅದ್ಭುತ ಸಾಧನೆ. ಜನಭಾಷೆಯು ಮಾಧ್ಯಮವೆ ಸರ್ವೋದಯದ ಮೂಲತತ್ವ, ಕೀಲಿಕೈ. ಈ ದೃಷ್ಟಿಯಿಂದ ಕನ್ನಡ ಮಾಧ್ಯಮ ಬಸವಾದಿ ಶರಣರ ಕಾಲದಲ್ಲೆ ಪ್ರಚುರವಾಗಿ, ಸಮಾಜ ಸುಧಾರಣೆಗೆ ಹಾಗೂ ನವಸಮಾಜ ನಿರ್ಮಾಣಕ್ಕೆ ಪ್ರಮುಖ ಸಾಧನವಾಗಿ ಪರಿಣಮಿಸಿದ್ದನ್ನು ನೋಡುತ್ತೇವೆ. ಸಂಸ್ಕೃತ ಭಾಷೆಯಲ್ಲಿ ನಿಕ್ಷಿಪ್ತವಾಗಿ ಜನಸಾಮಾನ್ಯರಿಗೆ ಅಗಮ್ಯವಾಗಿದ್ದ ಧರ್ಮರಹಸ್ಯವನ್ನು ತಿಳಿಯಾದ ಅಚ್ಚಗನ್ನಡದಲ್ಲಿ ಅವರಿಗೆ ತಿಳಿಸಿಕೊಟ್ಟರು ಬಸವಣ್ಣನವರು. ಧರ್ಮವನ್ನು ಕನ್ನಡಿಸಿ ಹೇಳಿದ್ದು ಮಾತ್ರವಲ್ಲ, ಅದನ್ನು ಸಹಜ ಶುದ್ಧ ರೂಪದಲ್ಲಿ

* ೨೨೬೫/೧೯, 'ಭಾರತಿ', ೬ನೆಯ ಕ್ರಾಸ್, ವಿನಾಯಕ ನಗರ, ಮೈಸೂರು – ೫೭೦ ೦೧೨.





ಅನಾವರಣ ಮಾಡಿದ ಕೀರ್ತಿಯೂ ಅವರಿಗೆ ಸಲ್ಲಬೇಕು. ಧರ್ಮವೆಂದರೆ ಅಗ್ರಾಹ್ಯವಾದ ಅನನುಸರಣೀಯವಾದ ಜಟಿಲ ಜಾಲವೂ ಅಲ್ಲ, ಒಂದು ವರ್ಗದ ಸೊತ್ತೂ ಅಲ್ಲ. ಅದು ಎಲ್ಲರ ಆಸ್ತಿಯಾಗಬೇಕು, ಎಲ್ಲರ ಸುಖಕ್ಕೂ ಅಭ್ಯುದಯಕ್ಕೂ ಕಾರಣವಾಗಬೇಕು ಎಂಬುದು ಬಸವಣ್ಣನವರ ನಿಲುವು. ಅದನ್ನವರು ಅಪ್ರತಿಹತವಾದ ರೀತಿಯಲ್ಲಿ ಮುಂದೊತ್ತಿದರು.

ಬಸವಣ್ಣನವರು ಬುದ್ಧನಂತೆ ಹಿಂದೂ ಧರ್ಮ ದಿಂದ ಸಿಡಿದು ಹೋಗಲಿಲ್ಲ; ಅದರ ಚೌಕಟ್ಟಿನೊಳಗಿದ್ದು ಕೊಂಡೇ ಅದನ್ನು ಶುದ್ಧೀಕರಿಸುವ, ತನ್ಮೂಲಕ ಸಮಾಜ ವನ್ನು ಮೇಲೆತ್ತುವ ಮಹಾಕಾರ್ಯದಲ್ಲಿ ಉದ್ಯುಕ್ತರಾದರು. ಅವರ ಕಾಲದಲ್ಲಿ ಹಿಂದೂ ಧರ್ಮ ಕಿಲುಬುಗಟ್ಟಿ, ಪಾಚಿ ಕವಿದು, ಬಂದಳಿಕೆ ಹಿಡಿದು ವ್ಯಾಧಿಗ್ರಸ್ತವಾಗಿತ್ತು; ಪುರೋಹಿತಶಾಹಿಗೆ ರಕ್ಷೆಯಾಗಿ ಪರಿಣಮಿಸಿತ್ತು. ಈ ಪುರೋಹಿತ ವರ್ಗಕ್ಕೆ ಇಡೀ ಸಮಾಜ ಮೇಹುಗಾಡಾ ಗಿತ್ತು; ಸಾಮಾನ್ಯ ಜನ ಅಜ್ಞಾನ ಮೌಢ್ಯ ಶೋಷಣೆಗಳಿಗೆ ಪಕ್ಕಾಗಿ ಉದ್ಧಾರ ಕಾಣದೆ ಕತ್ತಲಲ್ಲಿ ತೊಳಲಾಡುತ್ತಿದ್ದರು. ಬಸವಣ್ಣನವರು ಈ ಶೋಚನೀಯ ಪರಿಸ್ಥಿತಿಯನ್ನು ತಪ್ಪಿಸಲು ಜೀವನ ಪರ್ಯಂತ ಹೆಣಗಿದರು. ಧರ್ಮ ವನ್ನು ಅವರು ಕರ್ಮಕಾಂಡದಿಂದ ಪ್ರತ್ಯೇಕಿಸಿ, ಅದರ ನೈಜವಾದ ತಿರುಳನ್ನು ಜನತೆಯ ಮುಂದಿರಿಸಿದರು; ಶಾಸ್ತ್ರಗಳನ್ನು ಹಿಂದಿಕ್ಕಿ, ಆರ್ಷೇಯ ವಾದ ವೇದೋಪ ನಿಷತ್ತುಗಳ ಶ್ರೇಯಸ್ಕರವಾದ ಸಾರವನ್ನು ಅವರು ಪರಿಗ್ರಹಿಸಿದರು; ಪುಷ್ಟಿದಾಯಕವಾದ ನಿತ್ಯಾಂಶಗಳನ್ನು ಹೀರಿಕೊಂಡು, ಬಾಹ್ಯವೂ ಬರಡೂ ಆದುದನ್ನೆಲ್ಲ ತೂರಿಬಿಟ್ಟರು. ಇದರಿಂದ ಸಮಾಜದಲ್ಲಿ ಅಪೂರ್ವ ಜಾಗೃತಿಯುಂಟಾಯಿತು. ಸಾಮಾನ್ಯ ಜನರ ಜಾಡ್ಯ ಅಜ್ಞಾನಗಳು ತೊಲಗಿ, ಸರ್ವೋದಯಕ್ಕೆ ಶಿವಪಥ ತೆರೆದುಕೊಂಡಿತು.

ಎಲ್ಲರಿಗೂ ನಿಲುಕುವಂತೆ ಸರಳ ಸುಲಭವಾದ, ಮನಕ್ಕೆ ನಾಟುವಂತಹ ಮಾತುಗಳಲ್ಲಿ ಧರ್ಮಬೋಧೆ ಮಾಡಿದ್ದರಿಂದ–ಧರ್ಮವನ್ನು ಮನೆಮಾತು ಮಾಡಿಕೊಟ್ಟದ್ದರಿಂದ–ಸಮಾಜದಲ್ಲಿ ಧಾರ್ಮಿಕ ಸಮಾನತೆಗೆ ಅವಕಾಶವಾಯಿತು. ಅಂತೆಯೇ ಸಾಮಾಜಿಕ ಸಮಾನತೆಯ ಸ್ಥಾಪನೆಗೂ ಬಸವಣ್ಣನವರು ಉಗ್ರವಾಗಿ ಹೋರಾಟ ಹೂಡಿದರು. ವರ್ಣವ್ಯವಸ್ಥೆ, ಜಾತಿಪದ್ಧತಿ ಹಿಂದೂ ಧರ್ಮ ಬೆಳೆಸಿಕೊಂಡು ಬಂದ ಒಂದು ಕರಾಳ ಪೀಡೆ, ಘೋರಶಾಪ. ಇದರ ಶನಿಮುಷ್ಟಿಯಿಂದ ಭಾರತೀಯ ಸಮಾಜ ಇನ್ನೂ ಮುಕ್ತವಾಗಿಲ್ಲ. ಬಸವಣ್ಣನವರು ಜಾತಿಪದ್ಧತಿಯ ಬೇರಿಗೇ ಬೆನ್ನೀರು ಹೊಯ್ಯಲು ಸರ್ವಪ್ರಯತ್ನಗಳನ್ನೂ ಮಾಡಿದ ರೆಂಬುದನ್ನು ಎಷ್ಟು ಹೊಗಳಿದರೂ ಕಡಿಮೆ. ಅವರು ಜಾತಿಗಳ ಅಡ್ಡಗೋಡೆಗಳನ್ನು ಕುಟ್ಟಿ ಕೆಡವಲು ತಮ್ಮ ಸರ್ವಶಕ್ತಿಯನ್ನೂ ವಿನಿಯೋಗಿಸಿದ ಮಹಾನು ಭಾವರು.

ಅಸ್ಪೃಶ್ಯತೆ ಹಿಂದೂಧರ್ಮಕ್ಕಂಟಿದ ಮತ್ತೊಂದು ಲಜ್ಜಾಸ್ಪದ ಕಳಂಕ; ಅದನ್ನು ತೊಡೆದು ಹಾಕುವುದೂ ಬಸವಣ್ಣನವರ ಜೀವಿತೋದ್ದೇಶವಾಗಿತ್ತು. ಅವರು ವ್ಯಕ್ತಿಯ ಯೋಗ್ಯತೆಯನ್ನು ನೀತಿಯ ಮಾನದಂಡದಿಂದ ಅಳೆದರು, ಜಾತಿಯಿಂದಲ್ಲ. ಯಾರು ಧರ್ಮನಿರತರೊ, ಶಿವಭಕ್ತರೊ, ಸದಾಚಾರ ಸಂಪನ್ನರೊ ಅವರೇ ಕುಲಜರು; ತದ್ವಿರುದ್ಧ ರೀತಿಯಲ್ಲಿ ಬದುಕುವವರೇ ಕುಲಹೀನರು –ಇದು ಬಸವಣ್ಣನವರ ಪುನರ್ಮೌಲ್ಯಮಾಪನ. **"ಕೂಡಲ ಸಂಗನ ಶರಣರೇ ಕುಲಜರು"** ಎಂದು ಸೂತ್ರಿಸಿ ಅವರು ಹೀಗೆ ಹೇಳುತ್ತಾರೆ:

***ಕೊಲುವವನೇ ಮಾದಿಗ,***
***ಹೊಲಸು ತಿಂಬವನೇ ಹೊಲೆಯ,***
***ಕುಲವೇನೋ? ಆವಂದಿರ ಕುಲವೇನೋ?***
***ಸಕಲ ಜೀವಾತ್ಮರಿಗೆ ಲೇಸನೇ ಬಯಸುವ***
***ನಮ್ಮ ಕೂಡಲಸಂಗನ ಶರಣರೇ ಕುಲಜರು!***

**"ಶಿವಭಕ್ತರಿಗಿಂತ ಹಿರಿಯರಿಲ್ಲ"** ಎಂಬುದೇ ಬಸವಣ್ಣನವರ ನಿರ್ಣಯ. ವ್ಯಕ್ತಿಯ ಹಿರಿಮೆ ಕಿರಿಮೆಗಳು ಅವನ ಹುಟ್ಟಿನ ಮೇಲೆ ನಿಂತಿಲ್ಲ; ಅವನ ಗುಣಶೀಲಗಳ ಮೇಲೆ, ನಡೆನುಡಿಗಳ ಮೇಲೆ ನಿಂತಿವೆ.

ಬ್ರಾಹ್ಮಣನಾದ ಮಧುವರಸನ ಮಗಳಿಗೂ ಮಾದಿಗರವನಾದ ಹರಳಯ್ಯನ ಮಗನಿಗೂ ಬಸವಣ್ಣನವರು ಮಾಡಿಸಿದ ಅಂತರ್ಜಾತೀಯ ವಿವಾಹ ಅವರ ಜಾತಿವಿನಾಶ ಧೋರಣೆಯ ಮೇಲೆ ಬೆಳಕು ಚೆಲ್ಲುತ್ತದೆ.

ಗಂಡು–ಹೆಣ್ಣುಗಳ ಸಮಾನತೆಯೂ ಬಸವಣ್ಣನವರ ಗುರಿಯಾಗಿತ್ತು. ಹೀನಕುಲದವರು ಹೇಗೊ ಹಾಗೆ ಹೆಣ್ಣು ಕೂಡ ಧರ್ಮಕ್ಕೆ ಅನಧಿಕಾರಿ ಎಂಬುದು ಹಿಂದೂ ಧರ್ಮದ ಒಂದು ಸಿದ್ಧಾಂತ. ಇದನ್ನು ಬಸವಾದಿ ಶರಣರು ಅಳಿಸಿಹಾಕಿದರು. ಸ್ತ್ರೀ ಆಧ್ಯಾತ್ಮಿಕವಾಗಿ, ಸಾಮಾಜಿಕವಾಗಿ ಮಾತ್ರವಲ್ಲದೆ ಸಾಹಿತ್ಯಕವಾಗಿಯೂ ಪುರುಷನಿಗೆ ಹೆಗಲೆಣೆ ಎಂಬುದನ್ನು ವಚನ ಸಾಹಿತ್ಯ ಉದ್ಘೋಷಿಸುತ್ತಿದೆ. ವಾಸ್ತವವಾಗಿ ಸ್ತ್ರೀ ಸ್ವಾತಂತ್ರ್ಯ ಚಳವಳಿ ಅಂದೇ ಆರಂಭಗೊಂಡಿತು.

ಬಸವಣ್ಣನವರ ಕಾಲದ ಸಮಾಜದಲ್ಲಿ ಪ್ರಾಣಿಬಲಿ ರೂಢವಾಗಿತ್ತು; ಅದನ್ನೇ ಧರ್ಮಾಚರಣೆಯೆಂದು ಜನ ಭ್ರಮಿಸಿದ್ದಿರಬೇಕು. ಬಸವಣ್ಣನವರು ಅದನ್ನು ಅಲ್ಲಗಳೆದು, ಅಹಿಂಸೆ ದಯೆಗಳ ಆವಶ್ಯಕತೆಯನ್ನು ಒತ್ತಿ ಹೇಳಬೇಕಾಯಿತು; ಧರ್ಮದ ಹೊಸ ವ್ಯಾಖ್ಯೆಯನ್ನೇ ಅವರು ನೀಡಿದರು:

*ದಯವಿಲ್ಲದ ಧರ್ಮವದೇವುದಯ್ಯ?*
*ದಯವೇ ಬೇಕು ಸರ್ವಪ್ರಾಣಿಗಳೆಲ್ಲರಲ್ಲಿ!*
*ದಯವೇ ಧರ್ಮದ ಮೂಲವಯ್ಯ;*
*ಕೂಡಲಸಂಗಯ್ಯನಂತಲ್ಲದೊಲ್ಲ, ಕಂಡಯ್ಯ.*

ಧರ್ಮದ ಹುರುಳನ್ನು ಹೀಗೆ ಸರಳವಾಗಿ ಸಂಕ್ಷಿಪ್ತವಾಗಿ ಸರ್ವಗ್ರಾಹ್ಯವಾಗಿ ಅವರು ಪ್ರತಿಪಾದಿಸುತ್ತಾರೆ:

**ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ,**
**ಮುನಿಯ ಬೇಡ, ಅನ್ಯರಿಗೆ ಅಸಹ್ಯಪಡಬೇಡ,**
**ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ–**
**ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ,**
**ಇದೇ ನಮ್ಮ ಕೂಡಲಸಂಗಮನನೊಲಿಸುವ ಪರಿ!**

ದೇವಲೋಕ ಮರ್ತ್ಯಲೋಕಗಳಿಗೆ ಹೊಸ ಅರ್ಥ ಕಲ್ಪಿಸಿದರು, ಬಸವಣ್ಣನವರ ದೃಷ್ಟಿಯಲ್ಲಿ ದೇವಲೋಕ ಎಲ್ಲೋ ಇರುವಂಥದಲ್ಲ, ಸತ್ತ ಮೇಲೆ ಗಳಿಸುವಂಥದಲ್ಲ. **"ಸತ್ಯವ ನುಡಿವುದೇ ದೇವಲೋಕ, ಮಿಥ್ಯವ ನುಡಿವುದೇ ಮರ್ತ್ಯಲೋಕ; ಆಚಾರವೇ ಸ್ವರ್ಗ, ಅನಾಚಾರವೇ ನರಕ."** ಬಸವಣ್ಣನವರು ಪರವನ್ನು ಮರೆಯದೆ, ಇಹ ಜೀವನದ ಶುದ್ಧಿ ಅರ್ಜವಗಳಿಗೆ ಪರಮ ಪ್ರಾಶಸ್ತ್ಯ ಕೊಡುತ್ತಾರೆ; **"ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ; ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯ"** ಮರ್ತ್ಯದಲ್ಲಿ ಹೇಗೋ ಬದುಕಿ ಸ್ವರ್ಗಕ್ಕೆ ತೂರಿಕೊಳ್ಳುವುದು ಸಾಧ್ಯವಿಲ್ಲ; ಅಂಥ ಯಾವ ಸುಲಭೋಪಾಯವೂ ಇಲ್ಲ. ಸ್ವರ್ಗದ ಕೀಲಿಕೈ ಇರುವುದು ಮರ್ತ್ಯದಲ್ಲಿ; ಅದನ್ನು ಇಲ್ಲೆ ಕಷ್ಟಪಟ್ಟು ಸಂಪಾದಿಸಬೇಕು. ಹೀಗೆ ಇಹವನ್ನೇ ಪರವಾಗಿ ಅರಳಿಸುವ ಕ್ರಾಂತಿಕಾರಕ ಮನೋಧರ್ಮ ಮತ್ತು ಧರ್ಮ ಬಸವಣ್ಣನವರದು.

ಬಹು ದೇವೋಪಾಸನೆಯನ್ನು ಅವರು ಖಂಡಿಸಿ ಏಕದೇವೋಪಾಸನೆಯನ್ನು ವಿಧಿಸಿದರು; "ದೇವನೊಬ್ಬ ನಾಮ ಹಲವು" ಎಂಬ ಸೂತ್ರವೆ ಈ ವಿಧಿಗೆ ತಳಹದಿ. "ನಂಬಿದ ಹೆಂಡತಿಗೆ ಗಂಡನೊಬ್ಬ" ಎಂದು ಅವರು ವಿವರಣೆ ಕೊಡುತ್ತಾರೆ. ಜನ ಕಂಡುಕಂಡುದನ್ನೆಲ್ಲ ದೇವರೆಂದು ಪೂಜಿಸುವ, ಕ್ಷುದ್ರದೈವಗಳಿಗೆರಗುವ ಮೂರ್ಖತನವನ್ನು ಅವರು ಹೀಗೆ ವಿಡಂಬಿಸುತ್ತಾರೆ:

***ಮಡಕೆ ದೈವ, ಮೊರ ದೈವ, ಬೀದಿಯ ಕಲ್ಲು ದೈವ,***
***ಹಣಿಗೆ ದೈವ, ಬಿಲ್ಲ ನಾರಿ ದೈವ ಕಾಣಿರೊ!***
***ಕೊಳಗ ದೈವ, ಗಿಣ್ಣಿಲು ದೈವ ಕಾಣಿರೊ!***
***ದೈವ ದೈವವೆಂದು ಕಾಲಿಡಲಿಂಬಿಲ್ಲ!***
***ದೇವನೊಬ್ಬನೇ ಕೂಡಲಸಂಗಮದೇವ.***

ಮೂಢನಂಬಿಕೆಗಳ ಮೇಲೆ ಬಸವಣ್ಣನವರು ಗದಾಪ್ರಹಾರ ಮಾಡಿದರು; ಧರ್ಮಕ್ಕೂ ಮೂಢನಂಬಿಕೆ ಶಕುನ ಇತ್ಯಾದಿಗಳಿಗೂ ಯಾವ ಸಂಬಂಧವೂ ಇಲ್ಲವೆಂಬುದನ್ನು ಸ್ಪಷ್ಟಪಡಿಸಿದರು.

ದೇವಾಲಯ ನಿರ್ಮಾಣಕ್ಕೆ ಬಸವಣ್ಣನವರ ವಿರೋಧವಿದೆ; ಸ್ಥಾವರ ಲಿಂಪೂಜೆಗೆ ಅವರ ಸಮ್ಮತಿಯಿಲ್ಲ. ತಾತ್ತ್ವಿಕವಾಗಿ ನೋಡಿದರೆ ದೇವಾಲಯಗಳು ಭಕ್ತನಿಗೂ ಭಗವಂತನಿಗೂ ಅಂತರವನ್ನು ಕಲ್ಪಿಸುತ್ತವೆ; ವ್ಯಾವಹಾರಿಕವಾಗಿ ನೋಡಿದರೆ, ಅವು ಸಾಮಾನ್ಯರನ್ನು ವಂಚಿಸಲು, ಶೋಷಿಸಲು ಮೇಲುವರ್ಗದವರು ಬಳಸಿಕೊಳ್ಳುವ ಸಾಧನವಾಗಿವೆ. ಈ ದೃಷ್ಟಿಯಿಂದ ಬಸವಣ್ಣನವರು ಬಾಹ್ಯ ದೇವಾಲಯಗಳಿಗೆ ಬೆಲೆ ಕೊಡದೆ, ತಮ್ಮ ದೇಹವೇ ದೇವಾಲಯವೆಂದು ಪರಿಗಣಿಸುವುದು ಸಮುಚಿತವಾಗಿದೆ: ***"ಎನ್ನ ಕಾಲೇ ಕಂಬ, ದೇಹವೇ ದೇಗುಲ, ಶಿರವೇ ಹೊನ್ನ ಕಳಸವಯ್ಯ!"***

ಕಾಯಕಕ್ಕೆ ಬಸವಣ್ಣನವರಿತ್ತ ಪ್ರಾಧಾನ್ಯ ಅತ್ಯಂತ ಗಮನಾರ್ಹವಾದುದು. ಅವರು ಕಟ್ಟಬಯಸಿದ ನೂತನ ಸಮಾಜದ ಒಂದು ಮುಖ್ಯಾಧಾರವೆಂದರೆ ಕಾಯಕತತ್ತ್ವ. ಸಮಾಜದ ಪ್ರತಿಯೊಬ್ಬ ವ್ಯಕ್ತಿಯೂ ಏನಾದರೊಂದು ದೈಹಿಕವಾದ ಕೆಲಸ ಮಾಡಬೇಕು, ಅದರಿಂದಲೇ ಜೀವನ ನಡೆಸಬೇಕು ಎಂಬುದು ಕಾಯಕತತ್ತ್ವದ ಒಂದು ಮುಖವಾದರೆ, ಯಾವ ಕೆಲಸವೂ ಕೀಳಲ್ಲ, ಪ್ರತಿಯೊಂದು ಕೆಲಸವೂ ಪವಿತ್ರ ಎನ್ನುವುದು ಇನ್ನೊಂದು ಮುಖ. ನಮ್ಮ ಸಮಾಜದಲ್ಲಿ ದುಡಿಯುವವರು ಕೆಲವರಾದರೆ ಹಾಯಾಗಿ ಕುಳಿತುಕೊಂಡು ಬೊಜ್ಜು ಬೆಳೆಸುವವರು ಬಹುಮಂದಿ. ಧರ್ಮದ ಹೆಸರಿನಲ್ಲೂ ಹೀಗೆ ನಡೆಯುವುದುಂಟು. ಈ ಅನ್ಯಾಯವನ್ನು ಹೋಗಲಾಡಿಸುವುದಕ್ಕಾಗಿಯೆ ಬಸವಣ್ಣನವರು ಎಲ್ಲರಿಗೂ ಕಾಯಕವನ್ನು ವಿಧಿಸಿದರು. ಅನೇಕ ಸಾಮಾಜಿಕ ಆರ್ಥಿಕ ಸಮಸ್ಯೆಗಳಿಗೆ





ರಾಮಬಾಣವಾಗಬಲ್ಲುದು, ಈ ಕಾಯಕತತ್ತ್ವ ಸಮಾಜದ ಅಸಮತೆ ದಾರಿದ್ರ್ಯಗಳನ್ನು ನಿವಾರಿಸುವ ಏಕೈಕ ಮಂತ್ರವಾಗಿದೆ: **"ಕಾಯಕವೇ ಕೈಲಾಸ."**

ಬಸವಣ್ಣನವರು ಸಂಸಾರತ್ಯಾಗವನ್ನು ವಿಧಿಸುವುದಿಲ್ಲ. ಸಂಸಾರದಲ್ಲಿದ್ದುಕೊಂಡೇ ಪರಮಾರ್ಥವನ್ನು ಸಾಧಿಸುವ ಕಲೆಯನ್ನು ಅವರು ಉಪದೇಶಿಸಿದ್ದಾರೆ:

***ಇಂದ್ರಿಯ ನಿಗ್ರಹವ ಮಾಡಿದರೆ***
***ಹೊಂದುವುವು ದೋಷಂಗಳು;***
***ಮುಂದೆ ಬಂದು ಕಾಡುವುವು ಪಂಚೇಂದ್ರಿಯಂಗಳು!***

ಎಂಬುದೇ ಅವರ ನಿಲುವು. ದೇಹದಂಡನೆಯನ್ನು ಅವರು ಒಪ್ಪುವುದಿಲ್ಲ:

***ಹುತ್ತವ ಬಡಿದರೆ ಹಾವು ಸಾವುದೇ?***
***ಅಘೋರತಪವ ಮಾಡಿದರೇನು?***
***ಅಂತರಂಗ ಆತ್ಮಶುದ್ಧಿಯಿಲ್ಲದವರನೆಂತು***
***ನಂಬುವನಯ್ಯ ಕೂಡಲಸಂಗಮದೇವ?***

ಮನಸ್ಸನ್ನು ಪಳಗಿಸಬೇಕು, ಪಾಕಗೊಳಿಸಬೇಕು ಎಂಬುದು ಬಸವಣ್ಣನವರ ಅಭಿಪ್ರಾಯ.

ಅಂತರಂಗ–ಬಹಿರಂಗ ಸಾಮರಸ್ಯವನ್ನು ಅವರು ವಿಶೇಷವಾಗಿ ಒತ್ತಿ ಹೇಳಿದ್ದಾರೆ; ಒಳ್ಳೆಯ ಆಲೋಚನೆ, ಆಲೋಚನೆಗೆ ತಕ್ಕ ನುಡಿ, ನುಡಿಗೆ ತಕ್ಕ ನಡೆ – ಇವುಗಳನ್ನು ಬೋಧಿಸಿದ್ದಾರೆ. "ನುಡಿಗೆ ತಕ್ಕ ನಡೆಯ ಕಂಡರೆ ಕೂಡಲ ಸಂಗಮ ತನ್ನೊಳಗಿರ್ಪನಯ್ಯ" ಎಂಬುದು ಅವರ ಆಶ್ವಾಸನೆ. ಅಂತರಂಗದ ಅರಿವು, ಬಹಿರಂಗದ ಕ್ರಿಯೆ ಎರಡಕ್ಕೂ ಅವರಲ್ಲಿ ಸಮಾನ ಪುರಸ್ಕಾರ.

ಪ್ರತಿಯೊಬ್ಬರೂ ಇತರರನ್ನು ತಿದ್ದಲು ಹೊರಡುವುದಕ್ಕೆ ಮುನ್ನ ತಮ್ಮನ್ನು ತಾವು ತಿದ್ದಿಕೊಳ್ಳಬೇಕು ಎಂಬುದು ಬಸವಣ್ಣನವರ ಆಶಯ. ಅವರು ಆಗ್ರಹಪೂರ್ವಕವಾಗಿ ಕೇಳುತ್ತಾರೆ:

***ಲೋಕದ ಡೊಂಕ ನೀವೇಕೆ ತಿದ್ದುವಿರಿ?***
***ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ,***
***ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ,***
***ನೆರೆಮನೆಯ ದುಃಖಕ್ಕೆ ಅಳುವರ ಮೆಚ್ಚ***
***ನಮ್ಮ ಕೂಡಲ ಸಂಗಮದೇವ.***

"ನಾನು ಹೇಳುವಂತೆ ಮಾಡು, ನಾನು ಮಾಡುವಂತೆ ಮಾಡಬೇಡ" ಎಂಬುದೇ ಜನರ ಪ್ರವೃತ್ತಿ; ಬಸವಣ್ಣನವರು ಇಲ್ಲಿ ಅದನ್ನು ತಿದ್ದುತ್ತಾರೆ. ಅವರಂತೂ ವೈಯಕ್ತಿಕವಾದ ಡೊಂಕುಗಳನ್ನು ತಿದ್ದಿಕೊಂಡ ಮೇಲೆಯೇ ಸಾರ್ವಜನಿಕ ರಂಗದ ಉದ್ಧಾರ, ಶುದ್ಧೀಕರಣಗಳಿಗೆ ಕೈ ಹಾಕಿದ್ದು. ಬರಿಯ ಪರೋಪದೇಶ ಪಾಂಡಿತ್ಯದಿಂದ ಏನೂ ಸಾಧಿತವಾಗುವುದಿಲ್ಲವೆಂಬುದಕ್ಕೆ ನಮ್ಮ ಇಂದಿನ ರಾಜಕೀಯ ನಾಯಕರ ವೈಫಲ್ಯಗಳ ಸರಮಾಲೆಯೆ ಸಾಕ್ಷಿ.

ಸಹಕಾರ ತತ್ತ್ವವನ್ನು ಬಸವಣ್ಣನವರು ಕೋಳಿಗಳ ನಿದರ್ಶನದ ಮೂಲಕ ಸೊಗಸಾಗಿ ತಿಳಿಯ ಹೇಳುತ್ತಾರೆ:

***ಕಾಗೆಯೊಂದಗುಳ ಕಂಡರೆ***
***ಕರೆಯದೇ ತನ್ನ ಬಳಗವನ್ನು;***
***ಕೋಳಿಯೊಂದು ಕುಟುಕ ಕಂಡರೆ***
***ಕೂಗಿ ಕರೆಯದೇ ತನ್ನ ಕುಲವೆಲ್ಲವನ್ನು?***
***ಶಿವಭಕ್ತನಾಗಿ ಭಕ್ತಿಪಕ್ಷವಿಲ್ಲದಿದ್ದರೆ***
***ಕಾಗೆ ಕೋಳಿಗಿಂತ ಕರಕಷ್ಟ***
***ಕೂಡಲ ಸಂಗಮದೇವ.***

ಹೀಗೆ ಹಂಚಿಕೊಂಡು ತಿನ್ನುವ ಬುದ್ಧಿ ಮಾನವರಿಗೆ ಬಂದಂದೇ ಕಲ್ಯಾಣಸಿದ್ಧಿ.

ಬಸವಣ್ಣನವರ ಕಾಲದಲ್ಲಿ ಏನೇನು ಸಮಸ್ಯೆಗಳು, ಅರಿಷ್ಟಗಳು ವಿಜೃಂಭಿಸುತ್ತಿದ್ದುವೊ ಅವು ಇಂದಿಗೂ ಉಳಿದಿವೆ; ಮತ್ತೂ ಹೆಚ್ಚಿನ ಪ್ರಮಾಣದಲ್ಲೆ ಇವೆ ಎಂದ ಮೇಲೆ ಬಸವಣ್ಣನವರ ಆದರ್ಶಗಳು ಈ ಹೊತ್ತಿಗೂ, ಇನ್ನು ಮುಂದೆಯೂ ದಾರಿದೀವಿಗೆಗಳೆಂಬುದರಲ್ಲಿ ತಿಲಮಾತ್ರವೂ ಸಂಶಯವಿಲ್ಲ. ಸತ್ಯ ಅಹಿಂಸೆಗಳ ಅನುಷ್ಠಾನ, ಜಾತಿ ನಿರ್ಮೂಲನ, ಸಾಮಾಜಿಕ ಸಮತಾಸಾಧನೆ, ಅಸ್ಪೃಶ್ಯತಾ ನಿವಾರಣೆ, ದಲಿತೋದ್ಧರಣ, ದಾರಿದ್ರ್ಯ ವಿಮೋಚನೆ, ಮೂಢನಂಬಿಕೆಗಳ ವರ್ಜನೆ, ದೇಶಭಾಷಾ ಮಾಧ್ಯಮದ ಜಾರಿ –ಮುಂತಾದುವೆಲ್ಲ ಇಂದಿಗೂ ಅತ್ಯವಶ್ಯವೂ ಅನಿವಾರ್ಯವೂ ಆಗಿವೆ. ಇವುಗಳನ್ನೆಲ್ಲ ಉಜ್ವಲವಾಗಿ ಪ್ರತಿಪಾದಿಸಿದೆ, ಅಷ್ಟೇ ಅಲ್ಲ, ಸ್ವತಃ ಬದುಕಿದ ಬಸವಣ್ಣನವರು ಜಗತ್ತಿನ ಯಾವ ಕ್ರಾಂತಿಕಾರಿಗೂ ಮಿಗಿಲಾಗಿ ಕಾಣುತ್ತಾರೆ. ಅವರು ಭೌತಿಕವಾಗಿ ಎಂಟುನೂರು ವರ್ಷಗಳಷ್ಟು

ಹಿಂದಿನವರಾದರೂ ಬೌದ್ಧಿಕವಾಗಿ ಈ ಇಪ್ಪತ್ತನೆಯ ಶತಮಾನಕ್ಕಿಂತ ಮುಂದಿನವರಾಗಿ ಕಾಣುತ್ತಾರೆ. ಅಂತೂ ತಮ್ಮ ಕಲ್ಪನೆಯ ಸುಖೀಸಮಾಜವನ್ನು ಎಲ್ಲ ಬಗೆಯ ಪಟ್ಟಭದ್ರ ಹಿತಾಸಕ್ತಿಗಳಿಂದಲೂ ಬಿಡುಗಡೆಗೊಂಡ, ಸತ್ಯಶಿವ ಸುಂದರವಾದ ಭೂತಲ ಸ್ವರ್ಗವನ್ನು-ಕಟ್ಟಲು ಅವರು ಧೀಮಂತವಾದ ಧೀರವಾದ ನೇರವಾದ ಹೋರಾಟದಲ್ಲಿ ತೊಡಗಿ, ಅಭೂತಪೂರ್ವವಾದ ಆಂದೋಲನವನ್ನುಂಟುಮಾಡಿ ತಮ್ಮ ಧ್ಯೇಯೋದ್ದೇಶಗಳಲ್ಲಿ ತತ್ಕಾಲಕ್ಕೆ ಯಶಸ್ವಿಯಾದರು.

ಬಸವೇಶ್ವರರು ಕಟ್ಟಲೆಳಸಿದ ಸಮಾಜದ ಚಿತ್ರವನ್ನು ಪರಿಭಾವಿಸಿದರೆ, ರವೀಂದ್ರನಾಥ ಟಾಗೂರರ ಈ ಹಾರೈಕೆ ನೆನಪಿಗೆ ಬರುತ್ತದೆ:

Where the mind is without fear and the head is held high;

Where Knowledge is free;

Where the world has not been broken up into fragments by narrow domestic walls;

Where words come out from the depth of truth;

Where tireless striving stretches its arms towards perfection;

Where the clear stream of reason has not lost its way into the dreary desert of dead habit;

Where the mind is led forward by thee into ever widening thought and action.

Into that heaven of freedom, my father, let my country awake.*

ಇಲ್ಲಿ "my country" ಎಂಬುದನ್ನು "my society" ಎಂದು ಬದಲಿಸಿಕೊಂಡರೆ, ಬಸವಣ್ಣನವರು ತಮ್ಮ ಕಣ್ಣ ಮುಂದಿರಿಸಿಕೊಂಡಿದ್ದ ಭವ್ಯೋನ್ನತವಾದ ಆದರ್ಶ ಪರಿಸ್ಫುಟವಾಗುತ್ತದೆ. ಅದು ನಮ್ಮ ವಿಸ್ಮಯ, ಗೌರವಗಳನ್ನು ಗೆದ್ದುಕೊಳ್ಳದಿರದು.

*(ಕೃಪೆ: ಬೆಳಕಿನ ಹೆಜ್ಜೆಗಳು)*

## ಅಭಿನಂದನೆ



### ಸಿದ್ಧಗಂಗಾ ಮಾಸಪತ್ರಿಕೆಗೆ ಹೆಚ್ಚು ಅಜೀವ ಸದಸ್ಯರನ್ನಾಗಿ ನೊಂದಾಯಿಸಿದ ಶ್ರೀ ಕೆ.ಎಸ್. ತೀರ್ಥಪ್ಪನವರು

ಶ್ರೀಮಠದ ಬಗ್ಗೆ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಬಗ್ಗೆ ಅಪಾರ ಭಕ್ತಿ, ಗೌರವವನ್ನು ಹೊಂದಿರುವ ಶ್ರೀ ತೀರ್ಥಪ್ಪನವರು ಹುಟ್ಟಿದ್ದು ಹಾಸನ ಜಿಲ್ಲೆ, ಬೇಲೂರು ತಾಲ್ಲೂಕು ಕೆರೆಗೋಡು ಗ್ರಾಮ. ತಂದೆ ಶರಣ ಕೆ.ಪಿ. ಶಿವೇಗೌಡರದು ಸುಸಂಸ್ಕೃತ ಕುಟುಂಬ. ಸಮಾಜ ಸೇವೆಯಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡಿರುವ ಶ್ರೀಯುತರು ಕಾಯಕ ಸದ್ಭಾವಿಗಳು. ನಿಸ್ವಾರ್ಥದಿಂದ ಸೇವೆ ಸಲ್ಲಿಸುವವರು ವಿರಳವಾಗುತ್ತಿರುವ ಈ ಸಮಾಜದಲ್ಲಿ ಯಾವುದೇ ಪ್ರತಿಫಲಾಪೇಕ್ಷೆಯಿಲ್ಲದೆ ಸಂತೋಷದಿಂದ ಸೇವೆ ಸಲ್ಲಿಸುತ್ತಿರುವವರಲ್ಲಿ ಶ್ರೀ ತೀರ್ಥಪ್ಪನವರು ಒಬ್ಬರು ಎಂದು ಹೇಳಲು ಅಭಿಮಾನವೆನಿಸುತ್ತದೆ. ಕಳೆದ ಅನೇಕ ವರ್ಷಗಳಿಂದ ಸಿದ್ಧಗಂಗಾ ಮಾಸಪತ್ರಿಕೆಗೆ ಸುಮಾರು ೪೦೦ ಅಜೀವ ಚಂದದಾರರನ್ನಾಗಿ ಮಾಡುವ ಮೂಲಕ ಪತ್ರಿಕೆಯ ಬೆಳವಣಿಗೆಗೆ ಕಾರಣರಾಗಿದ್ದಾರೆ.

ಬಸವಾದಿ ಶರಣರ ಜೀವನ ಆದರ್ಶಗಳನ್ನು ಜೀವನದಲ್ಲಿ ಅಳವಡಸಿಕೊಂಡಿರುವ ಶ್ರೀ ತೀರ್ಥಪ್ಪನವರು ದೇವಾಲಯಗಳಿಗೆ, ಮಠಮಾನ್ಯಗಳಿಗೆ ತಮ್ಮ ಆರ್ಥಿಕ ಇತಿಮಿತಿಯಲ್ಲಿ ಧನ ಸಹಾಯ ಮಾಡಿ ತಮ್ಮ ಔದಾರ್ಯವನ್ನು ಮೆರೆದಿದ್ದಾರೆ. ಶ್ರೀ ತೀರ್ಥಪ್ಪನವರನ್ನು ಸಿದ್ಧಗಂಗಾ ಪತ್ರಿಕಾ ಬಳಗ ಅಭಿನಂದಿಸುತ್ತ ಇನ್ನೂ ಹೆಚ್ಚಿನ ಸೇವೆ ಪತ್ರಿಕೆಗೆ ದೊರೆಯುವಂತೆ ಮಾಡಲಿ ಎಂದು ದಯಾಮಯನಾದ ಪರಶಿವನು ಅನುಗ್ರಹಿಸಲಿ ಹಾಗೂ ಇವರ ನಿಸ್ವಾರ್ಥ ಸೇವೆ ಬೇರೆಯವರಿಗೆ ಸ್ಫೂರ್ತಿಯನ್ನು, ಪ್ರೇರಣೆಯನ್ನು ನೀಡುವಂತಾಗಲಿ ಎಂದು ಆಶಿಸುತ್ತದೆ.







# ಶರಣ ನುಲಿಯ ಚಂದಯ್ಯ

– ಎಚ್.ಎಸ್. ಸಿದ್ಧಗಂಗಪ್ಪ *

ಶರಣ ನುಲಿಯ ಚಂದಯ್ಯ ಬಸವಣ್ಣನವರ ಪ್ರಭಾವಕ್ಕೆ ಒಳಗಾಗಿ ವಿಜಾಪುರ ಜಿಲ್ಲೆಯಿಂದ ಕಲ್ಯಾಣಕ್ಕೆ ಬಂದು ಹಳ್ಳದ ದಂಡೆಯಲ್ಲಿ ಬೆಳೆದ ಹುಲ್ಲನ್ನು ಕೊಯ್ದು ತಂದು ಹಗ್ಗ, ಕಣ್ಣಿ ಹೊಸೆದು ಮಾರಿ ಬಂದ ಹಣದಿಂದ ತಮಗೆ ಅಗತ್ಯವಾದಷ್ಟನ್ನು ಮಾತ್ರ ಇಟ್ಟುಕೊಂಡು ಉಳಿದ ಹಣದಿಂದ ಜಂಗಮರಿಗೆ ದಾಸೋಹ ಮಾಡುತ್ತಿದ್ದನು. ಇವನು ಕಾಯಕದ ಕಲ್ಪವೃಕ್ಷದ ಕೊಂಬೆಯೊಂದಾಗಿದ್ದನು.

ನುಲಿಯ ಚಂದಯ್ಯ "ಚೆನ್ನಬಸವಣ್ಣ ಪ್ರಿಯ ಚಂದೇಶ್ವರಲಿಂಗ" ಎಂಬ ಅಂಕಿತದಿಂದ ವಚನಗಳನ್ನು ರಚಿಸಿದ್ದಾರೆ. ಪ್ರಸ್ತುತ ೪೮ ವಚನಗಳು ದೊರಕಿವೆ. ಇವುಗಳಲ್ಲಿ ಬಹುಪಾಲು ಕಾಯಕ ಮತ್ತು ದಾಸೋಹಕ್ಕೆ ಸಂಬಂಧಿಸಿದ ವಚನಗಳಾಗಿವೆ. ಅವನ ಹುಟ್ಟಿದ ಊರು ವಿಜಾಪುರದಿಂದ ಪೂರ್ವಕ್ಕೆ ೧೮ ಮೈಲಿಗಳ ದೂರದಲ್ಲಿರುವ **'ಶಿವಣಗಿ'** ಎಂದು ತಿಳಿದುಬಂದಿದೆ.

ಬಸವಣ್ಣನವರು ಕಪ್ಪಡಿ ಸಂಗಮದಲ್ಲಿ ಲಿಂಗೈಕ್ಯರಾದ ಮೇಲೆ ಕಲ್ಯಾಣದಲ್ಲಿ ರಾಜಕೀಯ ಕ್ಷೋಭೆ ತಲೆದೋರಿ ಕೆಲವರು ಶ್ರೀಶೈಲ ಮಾರ್ಗವಾಗಿ ತೆರಳಿದರೆ ಮತ್ತೆ ಕೆಲವರು ಕಾರವಾರ ಜಿಲ್ಲೆಯ ಅರಣ್ಯ ಪ್ರದೇಶವನ್ನು ಹೊಕ್ಕರು. ಇಂತಹ ಸಂದರ್ಭಕ್ಕಾಗಿಯೇ ಕಾಯುತ್ತಿದ್ದ ಕೆಲವು ಕಿಡಿಗೇಡಿಗಳು ಕೊಲೆ, ಹಿಂಸೆ, ಸುಲಿಗೆ, ಅತ್ಯಾಚಾರಗಳು ಶಿವಶರಣರ ಮೇಲೆ ವಿಶೇಷವಾಗಿ ನಡೆದವು. ಶಿವಶರಣರು ಕಿಡಿಗೇಡಿಗಳ ವಿರುದ್ಧ ಹೋರಾಡುತ್ತಲೇ ಮುಂದೆ ಮುಂದೆ ಸಾಗಿದರು. ಆದರೆ ತೋರಗಲ್ಲು ನಾಡಿನ ಕಾತರವಳ್ಳಿ (ಈಗಿನ ಕಾದರಳ್ಳಿ) ಯಲ್ಲಿ ಘೋರ ಕದನವಾಗಿ ಜೀವ ರಕ್ಷಣೆಗಿಂತ ತಮ್ಮಲ್ಲಿದ್ದ ಅಪಾರವಾದ ವಚನಗಳ ತಾಳೇಗರಿ ಕಟ್ಟುಗಳನ್ನು ಸಂರಕ್ಷಿಸುವ ದೂರದೃಷ್ಟಿಯಿಂದ ಎರಡು ಗುಂಪಾಗಿ, ಅದರಲ್ಲಿ ಒಂದು ಗುಂಪು ಹಲಸಿಗೆ, ಜಗಳಬೆಟ್ಟ, ಸಾಂಬ್ರಾಣಿಗಳ ಮಾರ್ಗವಾಗಿ ಮೇಲುಗೈ ಯಲ್ಲಾಪುರಕ್ಕೆ ತೆರಳಿದರೆ, ಮತ್ತೊಂದು ಗುಂಪು ಕಿತ್ತೂರು, ನರೇಂದ್ರ, ಧಾರವಾಡ, ಸುತ್ತೂರು, ಎಣಕಲ್ಲು ಮಾರ್ಗವಾಗಿ ಕಲಘಟಗಿ ತಾಲ್ಲೂಕಿನಲ್ಲಿ ಈಗ ಇರುವ ತಂಬೂರು ಗ್ರಾಮದ ಮೂಲಕ ಮೇಲುಗೈ ಯಲ್ಲಾಪುರಕ್ಕೆ ಹೋಯಿತು. ಇಂದಿಗೂ ಶಿವಶರಣರು ಪ್ರಯಾಣ ಮಾಡಿದ ಕುರುಹುಗಳು ಆ ಭಾಗದಲ್ಲಿ ಹೇರಳವಾಗಿ ದೊರೆಯುತ್ತಿರುವುದೇ ಇದಕ್ಕೆ ಜ್ವಲಂತ ನಿದರ್ಶನವಾಗಿದೆ.

ಕರ್ನಾಟಕದ ಪಶ್ಚಿಮ ಭಾಗದಲ್ಲಿ ವೀರಶೈವಕ್ಕೊದಗಿದ್ದ ವಿಪತ್ತನ್ನು ಪರಿಹರಿಸಬೇಕೆಂದು "ಮುಕ್ತಮುನಿ" ಎಂಬುವರು ಶರಣೆ ನಾಗಲಾಂಬಿಕೆಯೊಡನೆ ವಿಚಾರ ವಿನಿಮಯ ಮಾಡಿ, ಒಮ್ಮತಕ್ಕೆ ಬಂದರು. ಅದರಂತೆ ನಾಗಲಾಂಬಿಕೆ ಮತ್ತು ನುಲಿಯ ಚಂದಯ್ಯನೊಡನೆ ಈಗಿನ ಶಿವಮೊಗ್ಗ ಜಿಲ್ಲೆಯ ತುಂಗಾ ಪ್ರದೇಶಕ್ಕೆ ಹೋಗಿ ಅಲ್ಲಿನ ವೀರಶೈವವನ್ನು ಉಳಿಸಬೇಕೆಂದು ಯೋಚಿಸಿದರು. ನಾಗಲಾಂಬಿಕೆಯ ಕೀರ್ತಿ ಗೌರವಗಳು ಎಲ್ಲ ಕಡೆಗೂ ಹರಡಿದ್ದರಿಂದ ಹೋದೆಡೆಗಳಲ್ಲಿ ಹಾರ್ದಿಕ ಸ್ವಾಗತ ದೊರೆಯಿತು. ಧೈರ್ಯ ನಿಧಿಯೆಂದೇ ಪ್ರಸಿದ್ಧಳಾಗಿದ್ದ ನಾಗಲಾಂಬಿಕೆ ನುಲಿಯ ಚಂದಯ್ಯ ನೊಡನೆ ಈಗಿನ ತರೀಕೆರೆಯ ಸಮೀಪದ 'ಎಣ್ಣೆಹೊಳೆ" ಎಂಬ ಗ್ರಾಮಕ್ಕೆ ಬಂದು ಅಲ್ಲಿಯೇ ಬೀಡುಬಿಟ್ಟಳು. ಸಿದ್ಧವೀರ ಸ್ವಾಮಿಗಳೆಂಬುವರು ಆಕೆಗೆ ಒಂದು ಮಠವನ್ನು ಕಟ್ಟಿಸಿಕೊಟ್ಟರು. ಹಾಗಾಗಿ ಆಕೆ ಆ ಮಠದಲ್ಲಿಯೇ ವಾಸಿಸುತ್ತಿದ್ದಳು.

ಒಟ್ಟಿನಲ್ಲಿ ನುಲಿಯ ಚಂದಯ್ಯ ಕಲ್ಯಾಣದ ಕ್ರಾಂತಿಯ ನಂತರ ಶರಣರ ಗುಂಪನ್ನು ಹಿಂಬಾಲಿಸದೆ ಒಂಟಿಯಾಗಿ ಉಳುವಿಗೆ ಬಂದು ನಂತರ ಅಲ್ಲಿಂದ

*೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ೮ನೇ ಬ್ಲಾಕ್, ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧



ನಾಗಲಾಂಬಿಕೆಯ ಜೊತೆ ಸೇರಿ ಶಿವಮೊಗ್ಗ ಪ್ರಾಂತದ ಎಣ್ಣೆಹೊಳೆಗೆ ಬಂದು ಅಲ್ಲಿಂದ ನಂದಿಗೆ ಹೋಗಿ, ನಂತರ ನಂದಿಯಿಂದ ಕಲ್ಲುಅತ್ತಿಗೆರೆಗೆ ಹೋಗಿ ತದನಂತರ ಹೊಳಲಕೆರೆ ಹತ್ತಿರದ ನುಲೇನೂರಿನಲ್ಲಿ ಕೆಲದಿನ ಕಾಲಯಾಪನೆ ಮಾಡಿ ಕೊನೆಗೆ ಅಲ್ಲಿಯೇ ಲಿಂಗೈಕ್ಯನಾದನೆಂದು ತಿಳಿದು ಬರುತ್ತದೆ. ಈಗಲೂ ಈ ನುಲೇನೂರಿನಲ್ಲಿ ಸುತ್ತಮುತ್ತಣ ಗ್ರಾಮಗಳಲ್ಲಿ ನುಲಿಯ ಚಂದಯ್ಯನವರ ಬಗ್ಗೆ ಅಪಾರವಾದ ಭಕ್ತಿ ಗೌರವವಿದೆ. ಪ್ರತಿವರ್ಷ ಆಶ್ವೀಜ ಮೊದಲನೆಯ ವಾರದಲ್ಲಿ ಬರುವ ಸೋಮವಾರದ ದಿನ ನುಲೇನೂರಿನಲ್ಲಿ ಜಾತ್ರೆಯಾಗುತ್ತದೆ. ಪ್ರತಿಯೊಬ್ಬರ ಮನೆಯಲ್ಲಿಯೂ ಚಂದಯ್ಯನ ಭಾವಚಿತ್ರಗಳು ಕಂಗೊಳಿಸುತ್ತಿವೆ. ಈ ನುಲೇನೂರಿನಲ್ಲಿ ನುಲಿಯ ಚಂದಯ್ಯನವರಿಗೆ ಸಂಬಂಧಿಸಿದ ಒಂದು ಶಿಲಾಲೇಖವಿತ್ತೆಂದೂ ಚಂದಯ್ಯನ ಬಗೆಗೆ ದುಮ್ಮಿಯ ರಾಯನು ಬರೆಯಿಸಿದ ಶಾಸನವೆಂದೂ ಅದನ್ನು ಯಾರೋ ಕಿಡಿಗೇಡಿಗಳು ಹಾಳು ಮಾಡಿದರೆಂದು ... ಚನ್ನಪ್ಪ ಎರೆಸೀಮೆಯವರು ತಮ್ಮ ಲೇಖನದಲ್ಲಿ ...ತಾರೆ. ಇಂಥ ಕಿಡಿಗೇಡಿಗಳಿಂದ

ಶಾಸನಗಳು ನಾಶವಾಗಿರುವುದು ನಿಜಕ್ಕೂ ಒಂದು ದುರಂತ.

ಈಗಿನ ನುಲೇನೂರು ಮತ್ತು ಅಕ್ಕಪಕ್ಕದ ಹತ್ತಿಪ್ಪತ್ತು ಗ್ರಾಮಗಳಲ್ಲಿ ಇಂದಿಗೂ ಹಬ್ಬ ಹರಿದಿನಗಳಲ್ಲಿ ಆಡುವ ನುಲಿಯ ಚಂದಯ್ಯನವರ ನಾಟಕದಲ್ಲಿ ನುಲೇನುರಿನಲ್ಲಿಯೆ ನುಲಿನ ಚಂದಯ್ಯ ಲಿಂಗೈಕ್ಯರಾದ ವಿಷಯ ಕೊನೆಯಲ್ಲಿ ಪ್ರಸ್ತಾಪವಾಗುತ್ತದೆ. ನುಲಿಯ ಚಂದಯ್ಯನವರ ಕೃಪಾಶೀರ್ವಾದಕ್ಕೆ ಪಾತ್ರರಾಗಿದ್ದ ನಂದಪ್ಪ-ಗಂಗಮ್ಮ ದಂಪತಿಗಳು ಲಿಂಗೈಕ್ಯರಾದ ಮೇಲೆ ಕೆರೆಯ ಏರಿಯ ಮೇಲೆ ನುಲಿಯ ಚಂದಯ್ಯನವರ ಗದ್ದುಗೆಯ ಎಡಬಲ ದಿಕ್ಕುಗಳಲ್ಲಿ ಅವರ ಗದ್ದುಗೆಗಳನ್ನು ಮಾಡಿದರೆಂದು ಹೇಳುತ್ತಾರೆ. ಆ ಗದ್ದುಗೆಗಳು ಈಗಲೂ ಇವೆ. ನುಲೇನೂರಿನಲ್ಲಿ ನುಲಿಯ ಚಂದಯ್ಯನವರ ಬಾವಿಯೆಂದು ಈಗಲೂ ಒಂದು ಬಾವಿಯನ್ನು ಜನ ತೋರಿಸುತ್ತಾರೆ.

ಕಲ್ಯಾಣದಲ್ಲಿ ತ್ರಿಪುರಾಂತಕನ ಕೆರೆಯ ಬದಿಯಲ್ಲಿರುವ ಗವಿಯೊಂದನ್ನು "ನುಲಿಯ ಚಂದಯ್ಯನವರ ಗವಿ" ಎಂದು ಹೇಳುತ್ತಾರೆ. ಬಹುಶಃ ಇದು ಅವನು ಪ್ರತಿನಿತ್ಯ ಶಿವಯೋಗಾನುಷ್ಠಾನ ಮಾಡುತ್ತಿದ್ದ ಸ್ಥಳವಾಗಿರಬೇಕು. ಇದು ಹೇಳಿಕೊಳ್ಳುವಷ್ಟು ದೊಡ್ಡ ಗವಿಯಲ್ಲದಿದ್ದರೂ, ಐತಿಹಾಸಿಕ ದೃಷ್ಟಿಯಿಂದ ಇದು ಮಹತ್ವಪೂರ್ಣವಾದ ಪ್ರಾಚೀನ ಅವಶೇಷ ಎಂದು ಹೇಳಬಹುದು. ಈ ಗವಿಯ ಮುಂಭಾಗದಲ್ಲಿ ಒಂದು ಬೇವಿನ ಮರವಿದ್ದು ಅದರ ಎಲೆಗಳು ಸ್ವಲ್ಪ ಸಿಹಿಯಾಗಿವೆಯೆಂದು ಹೇಳುತ್ತಾರೆ.

ಶಿವಶರಣರಲ್ಲಿ ನುಲಿಯ ಚಂದಯ್ಯ ಉನ್ನತ ಮಟ್ಟದ ಜ್ಞಾನಾನುಭವಿಯೆಂದೂ ಕಾಯಕ ಸದ್ಭಾವಿಯೆಂದೂ ಪ್ರಸಿದ್ಧನಾಗಿದ್ದನು. 'ಬಸವ ಪುರಾಣ', 'ಶೂನ್ಯ ಸಂಪಾದನೆ', 'ಶಿವತತ್ತ್ವ ಚಿಂತಾಮಣಿ' ಮೊದಲಾದ ಗ್ರಂಥಗಳಲ್ಲಿ ವಿಸ್ತಾರವಾಗಿಯೂ 'ಚೆನ್ನಬಸವ ಪುರಾಣ', 'ಗುರುರಾಜ ಚಾರಿತ್ರರೆ', 'ರಾಘವಾಂಕ ಚರಿತ್ರಾ' ಮೊದಲಾದ ಗ್ರಂಥಗಳಲ್ಲಿ ಸೂಚ್ಯವಾಗಿ ನುಲಿಯ ...



ಹುಲ್ಲನ್ನು ಹೊಸೆದು ಹಗ್ಗ ಕಣ್ಣಿಗಳನ್ನಾಗಿ ಮಾಡಿ ಕಲ್ಯಾಣ ನಗರದಲ್ಲಿ ಮಾರಿ ಅದರಿಂದ ಬಂದ ಹಣದಿಂದ ಗುರುಲಿಂಗ ಜಂಗಮ ದಾಸೋಹ ಮಾಡುತ್ತಿದ್ದನೆಂದು ಹೇಳಿದೆ.

ಕಾಯಕದ ಮಹತ್ವದ ಬಗ್ಗೆ ತನ್ನ ವಚನವೊಂದರಲ್ಲಿ ಹೀಗೆ ಹೇಳಿದ್ದಾನೆ.

**ಗುರುವಾದಡೂ ಕಾಯಕದಿಂದಲೇ ಜೀವನ್ಮುಕ್ತಿ**
**ಲಿಂಗವಾದಡೂ ಕಾಯಕದಿಂದಲೇ ಶಿಲೆಯ ಕುಲವ ಹರಿವುದು**
**ಜಂಗಮವಾದಡೂ ಕಾಯಕದಿಂದಲೇ ವೇಶಪಾಶ ಹರಿವುದು**
**ಗುರುವಾದಡೂ ಚರಸೇವೆಯ ಮಾಡಬೇಕು**
**ಜಂಗಮವಾದಡೂ ಚರಸೇವೆಯ ಮಾಡಬೇಕು**
**ಇದು ಚನ್ನಬಸವಣ್ಣಪ್ರಿಯ ಚಂದೇಶ್ವರ ಲಿಂಗದ ಅರಿವು**

ನುಲಿಯ ಚಂದಯ್ಯನ ಕಾಯಕ ನಿಷ್ಠೆ ಅಪೂರ್ವವಾದುದು. ಅವನೊಬ್ಬ ಮಹಾಕಾಯಕ ಯೋಗಿ. ತಾನು ಮಾಡುವ ಕಾಯಕವನ್ನು ಶ್ರದ್ಧೆಯಿಂದ ನಡೆಸುತ್ತಲೇ ಸಾಧನೆಯ ಮಾರ್ಗದಲ್ಲಿ ತನ್ನ ಬದುಕನ್ನು ಅರಳಿಸಿಕೊಂಡವನು. ಈ ವಚನದಲ್ಲಿ 'ಕಾಯಕ' ಎಂಬ ಒಂದು ನುಡಿಯ ಸುತ್ತಲೂ ಹಲವಾರು ಧಾರ್ಮಿಕ ಕ್ರಿಯೆಗಳು ಹಾಗೂ ಪ್ರಕಾರಗಳು ಅನಾವರಣಗೊಂಡಿವೆ. ಉದಾಹರಣೆಗೆ 'ಗುರು', 'ಜೀವನ್ಮುಕ್ತಿ', 'ಲಿಂಗ', 'ಶಿಲೆಯ ಕುಲ', 'ಜಂಗಮ', 'ವೇಶದಪಾಶ', ಮುಂತಾದವು. ಈ ಎಲ್ಲದರ ಪ್ರತಿಯೊಂದು ಕ್ರಿಯೆಯೂ ಶರಣ ಮಾರ್ಗದಲ್ಲಿ ಅವಶ್ಯಕವಾಗಿ ಪಾಲಿಸಬೇಕಾದಂಥ ನಿಯಮಗಳು ಅಥವಾ ಕರ್ತವ್ಯಗಳನ್ನು ಸೂಚಿಸುತ್ತದೆ. ಕಾಯಕದಿಂದಲೇ ಜೀವನ್ಮುಕ್ತಿ, ನಿಜ, ಆದರೆ ಎಂಥ ಕಾಯಕ, ಅದರ ವ್ಯಾಖ್ಯೆಯನ್ನು ನುಲಿಯಚಂದಯ್ಯನಿಗಿಂತ ಚೆನ್ನಾಗಿ ಮಾಡಿದವರಿಲ್ಲ. ಕಾಯಕದ ಸೂತ್ರಕ್ಕೆ ಭಾಷ್ಯ ಬರೆದವರು. ಶರಣರು ಇಂಥ ಮಹತ್ವದ ವಿಷಯಗಳ ನಡುವೆಯೂ ಆರ್ಥಿಕ ಚಿಂತನೆಗೆ, ವಿಚಾರಕ್ಕೆ ಕೊಟ್ಟ ಮಹತ್ವದ ಅರಿವಾಗುತ್ತದೆ. ೧೨ನೇ ಶತಮಾನದಲ್ಲಿ ಕಾಯಕಕ್ಕೆ ಅಂತಹ ಮಹತ್ವ ನೀಡಿದ್ದರಿಂದಲೇ ಚನ್ನಯ್ಯ ಚಮ್ಮಾರನಾದರೂ ತಾನು ಮಾದಿಗನೆಂಬುದಾಗಲಿ, ಮಾಚಯ್ಯ ತಾನು ಮಡಿವಾಳನೆಂದಾಗಲೀ, ರಾಮಣ್ಣ ತಾನೊಬ್ಬ ದನಕಾಯುವನೆಂದಾಗಲಿ ತೋರಲಿಲ್ಲ. ಇಲ್ಲಿ ಶರಣರ ಜೀವನದ ಮಹೋನ್ನತ ದೃಷ್ಟಿಯನ್ನು ಕಾಣಬಹುದು.

ನುಲಿಯ ಚಂದಯ್ಯನ ಜೀವನದಲ್ಲಿ ಘಟಿಸಿದ ಘಟನೆಯನ್ನು ಹೇಳದೇ ಹೋದರೆ ಅವರ ಕಾಯಕ ನಿಷ್ಠೆಗೆ ನ್ಯಾಯ ದೊರೆಯುವುದಿಲ್ಲ. ನುಲಿಯ ಚಂದಯ್ಯ ತನ್ನ ಇತಿಮಿತಿಯಲ್ಲಿಯೇ ಉತ್ತಮ ಜೀವನ ಸಾಗಿಸುತ್ತಿದ್ದವನು, ಪ್ರತಿನಿತ್ಯವು ಪ್ರಾತಃಕಾಲದ ಲಿಂಗ ಪೂಜೆಯನ್ನು ಶ್ರದ್ಧಾಭಕ್ತಿಯಿಂದ ಮುಗಿಸಿ ಹಳ್ಳಕ್ಕೆ ಹೋಗಿ, ಅಲ್ಲಿ ನಳನಳಿಸಿ ಬೆಳೆದ ಹುಲ್ಲನ್ನು ಕೊಯುತ್ತಿರುವಾಗ ಒಮ್ಮೆ ಅವನ ಎದೆಯ ಮೇಲೆ ಕಟ್ಟಿದ್ದ ಲಿಂಗ ಜಾರಿ ನೀರಿನಲ್ಲಿ ಬಿದ್ದಿತು. ಚಂದಯ್ಯನು ಅದನ್ನು ಗಮನಿಸಿದೆ ಕಾಯಕದಲ್ಲಿ ಮಗ್ನನಾಗಿದ್ದ. ನೀರಿನಲ್ಲಿ ಬಿದ್ದ ಇಷ್ಟಲಿಂಗವನ್ನು ಅಲ್ಲಿಯೇ ಬಿಟ್ಟು ಹುಲ್ಲಿನ ಹೊರೆಯನ್ನು ಹೊತ್ತು ಹೊರಡಲು ಇಷ್ಟಲಿಂಗವೂ ಅವನನ್ನು ಹಿಂಬಾಲಿಸಿ ಹೊರಟಿತೆಂದೂ, ಲಿಂಗವನ್ನು ಗಮನಿಸಿದ ಚಂದಯ್ಯ **"ನಾನು ಹೋಗೆನ್ನದೆ ಹೋಗಿರುವ ನಿನ್ನನ್ನು ಮರಳಿ ಸ್ವೀಕರಿಸಲಾರೆ"** ಎಂದು ನುಡಿದು ಹಾಗೆಯೇ ಹೊರಟನೆಂದೂ, ಶರಣ ಮಡಿವಾಳ ಮಾಚಯ್ಯನ ಮಧ್ಯಸ್ಥಿಕೆ ಹಾಗೂ ಸಮಾಧಾನದ ಮಾತುಗಳಿಂದ ತೃಪ್ತನಾಗಿ **"ಕಾಯಕದಲ್ಲಿ ನೆರವಾಗುವುದಾದರೆ ಮನೆಗೆ ಬರಲಿ"** ಎಂದು ಕರಾರು ಹಾಕಿದನೆಂದೂ, ಲಿಂಗವು ಅವನ ಷರತ್ತಿಗೆ ಒಪ್ಪಿ ತಾನೊಂದು ಕಣ್ಣಿ ಹೊಸೆದು ಮಾರಲು ಹೋದಾಗ ಅದನ್ನು ಕೊಳ್ಳಲು ಯಾರೂ ಮುಂದೆ ಬರಲಿಲ್ಲ. ಆಗ ಆ ಲಿಂಗ ಬಸವಣ್ಣನವರ ಮನೆಗೆ ಹೋಯಿತೆಂದೂ, ಬಸವಣ್ಣನವರು ಲಿಂಗದ ಮನವಿಯನ್ನು ಮಾನ್ಯಮಾಡಿ ಸಾವಿರ ಹೊನ್ನುಗಳನ್ನು ಕೊಟ್ಟು ಕೊಂಡುಕೊಂಡರೆಂದೂ, ಅದನ್ನು ತಂದು ಚಂದಯ್ಯನಿಗೆ ಕೊಡಲು ಹೋದಾಗ "ಇದು ಆಸೆಯಿಂದ ಬಂದ ಹೊನ್ನು ಕಾಯಕಕ್ಕೆ ಸಲ್ಲದೆಂದು" ಭಾವಿಸಿದ ಚಂದಯ್ಯ ಒಂದು ಹೊನ್ನನ್ನು ಮಾತ್ರ ಉಳಿಸಿಕೊಂಡು ಉಳಿದುದನ್ನು ಬಸವಣ್ಣನವರಿಗೆ ಹಿಂದಿರುಗಿಸಿದನೆಂದು ತಿಳಿದು ಬರುತ್ತದೆ. ಚಂದಯ್ಯನಂತ ಕಾಯಕ ನಿಷ್ಠ ಶರಣನಿಂದ ಲಿಂಗವು ಕಾಯಕದ ಪಾಠ ಕಲಿಯುವಂತಾದುದು. ಅಂದರೆ ಸಾಕ್ಷಾತ್ ಪರಶಿವನೇ ತನ್ನ ಭಕ್ತನಿಂದ ಪಾಠ ಕಲಿಯುವಂತಾದುದು ಶರಣರು ಕಾಯಕಕ್ಕೆ ನೀಡಿದ ಗೌರವವನ್ನು, ಮಹತ್ವವನ್ನು ತಿಳಿಸುತ್ತದೆ.

ಕಥೆ ಸಾಂಕೇತಿಕವಾದರೂ ಅದರ ಹಿಂದಿರುವ ಅರ್ಥ ಅದ್ಭುತವಾದುದು. ನಮ್ಮ ದುಡಿಮೆಗಿಂತ ಹೆಚ್ಚಿನ

ಪ್ರತಿಫಲವನ್ನು ಪಡೆಯುವುದು ದುರಾಶೆಯೇ ಹೊರತು ಕಾಯಕವಲ್ಲ. ಒಂದು ರೂಪಾಯಿನ ಲಾಟರಿ ಟಿಕೆಟ್‌ನ್ನು ತೆಗೆದುಕೊಂಡು ಒಂದು ಲಕ್ಷ ರೂಪಾಯಿ ತನಗೆ ಬರುತ್ತದೆಂದು ಕನಸು ಕಾಣುತ್ತ, ಆ ಪಾಪದ ಹಣಕ್ಕೆ ಬಾಯಿ ಬಿಡುವ ಇಂದಿನ 'ಲಾಟರಿಯ ಸಂಸ್ಕೃತಿ'ಯ ಹಿನ್ನೆಲೆಯಲ್ಲಿ ಈ ಕಾಯಕ ಸಂಸ್ಕೃತಿಯನ್ನು ಪರಿಭಾವಿಸಬೇಕು. ಮೋಳಿಗೆ ಮಾರಯ್ಯ ಬೆವರು ಸುರಿಸಿ ತಂದ ಸೌದೆ ಹೊರೆಯ ಒಂದೊಂದು ಕಟ್ಟಿಗೆಯೂ ಚಿನ್ನದ ದಂಡವಾದವು ಎಂಬ ಕಥೆಯ ಹಿಂದಿರುವುದು ನಿಷ್ಠಾವಂತ ದುಡಿಮೆಗೆ ಕಟ್ಟಿದ ಆಂತರಿಕ ಮೌಲ್ಯವಾಗಿದೆ.

ನುಲಿಯ ಚಂದಯ್ಯ ಮತ್ತೊಂದು ವಚನದಲ್ಲಿ ಕಾಯಕದ ಬಗ್ಗೆ ಮೌಲಿಕವಾದ ವ್ಯಾಖ್ಯಾನ ನೀಡಿದ್ದಾನೆ.

*ಸತ್ಯ ಶುದ್ಧ ಕಾಯಕದಲ್ಲಿ ಚಿತ್ತ ವಿಚ್ಛಂದವಾಗಿರಬೇಕು*
*ನೇಮದ ಕೂಲಿಯಂದಿನ ನಿತ್ಯ ನೇಮದಲ್ಲಿ ಸಂದಿರಬೇಕು*
*ನೇಮದ ಕೂಲಿಯ ಬಿಟ್ಟು ಹೇಮದಾಸೆಗೆ ಕಾಯಿಸಿ ದ್ರವ್ಯದ ಹಿಡಿದರೆ*
*ತಾ ಮಾಡುವ ಸೇವೆ ನಷ್ಟವಯ್ಯ*

ಈ ವಚನ ಮೇಲುನೋಟಕ್ಕೆ ಸರಳವಾಗಿ ಕಂಡರೂ ಒಳಹೊಕ್ಕು ನೋಡಿದಾಗ ಸಂಕೀರ್ಣವಾಗುತ್ತಾ ಹೋಗುತ್ತದೆ. ಅನೇಕ ಗಹನವಾದ ವಿಚಾರಗಳು ಒಳಗೊಂಡಿರುವುದು ಕಂಡುಬರುತ್ತದೆ. ತಾನು ಕೈಗೊಂಡ ವೃತ್ತಿಯನ್ನು ಪರಿಶುದ್ಧವಾದ ಮನಸ್ಸಿನಿಂದ, ಪ್ರಾಮಾಣಿಕತೆಯಿಂದ ಮಾಡಬೇಕು, ಹಾಗೆ ಮಾಡಿದ ಕಾಯಕಕ್ಕೆ ನಿಗದಿಪಡಿಸಿದಷ್ಟು ಮಾತ್ರ ಪ್ರತಿಫಲವನ್ನು ಪಡೆಯಬೇಕು. ಹಾಗೆ ಮಾಡದೆ ಹೇಮದಾಸೆಗೆ ಕಾಮಿಸಿ ದ್ರವ್ಯವ ಹಿಡಿದರೆ ತಾನು ಮಾಡುವ ಕಾಯಕ ನಷ್ಟ ಅಥವಾ ನಿಯುಮಬಾಹಿರ. ನೇಮದಕೂಲಿಗೆ ಸರಿಯಾಗುವಷ್ಟು ಕಾಯಕ ಸಂದಿರಬೇಕು. ಹಾಗೆ ಪಡೆದ ಕೂಲಿ ಅಥವಾ ಪ್ರತಿಫಲವನ್ನು ಯಾವುದೇ ಕಾರಣಕ್ಕೂ ನಾಳೆಗೆಂದು ಸಂಗ್ರಹಿಸಿಡುವಂತಿಲ್ಲ. ಶರಣರ ಈ ಮೌಲಿಕವಾದ ಅರ್ಥಪೂರ್ಣವಾದ ಕಾಯಕ ಸಿದ್ಧಾಂತವನ್ನು ಇಂದಿನ ಸಮಾಜದಲ್ಲಿ ಎಲ್ಲರೂ ಜೀವನದಲ್ಲಿ ಅಳವಡಿಸಿಕೊಂಡು ಅನುಷ್ಠಾನಕ್ಕೆ ತಂದಿದ್ದಾದರೆ. ಮೇಲು, ಕೀಳು, ದುರಾಸೆ, ಕೊಲೆ, ಸುಲಿಗೆ, ಮೋಸ, ವಂಚನೆ ಇವೇ ಮೊದಲಾದ ಸಮಾಜ ಕಂಟಕ ಅನಿಷ್ಟಗಳು ಇರುತ್ತಿರಲಿಲ್ಲ. ಅಷ್ಟೇ ಅಲ್ಲ, ಆರ್ಥಿಕ ... ಮಾಡುತ್ತಿರುವ 'ಕಪ್ಪು ... ಇರುತ್ತಿರಲಿಲ್ಲ.

ಕಾಯಕದಲ್ಲಿ ಮೇಲು ಕೀಳೆಂಬ ಭಾವನೆಯಿಲ್ಲದೆ ಸದ್ಗುಣಗಳಿಂದಲೇ ಯೋಗ್ಯತೆಯನ್ನು ನಿರ್ಧರಿಸುವ ಮತ್ತು ಎಲ್ಲರೂ ಸಮಾನ ಅವಕಾಶಗಳನ್ನು ಪಡೆಯಬಲ್ಲ ಆದರ್ಶ ಸಮಾಜ ರಚನೆ ಶರಣರ ಮಹೋದ್ದೇಶವಾಗಿತ್ತು. ವ್ಯಕ್ತಿ ಯಾವುದೇ ವೃತ್ತಿಯನ್ನು ಕೈಗೊಂಡಿರಲಿ, ಅವನಿಗೆ ಪೂರ್ಣವಿಕಾಸಕ್ಕೆ ಮುಕ್ತ ವಾತಾವರಣ ದೊರೆಯಬೇಕು. ಮೇಲು-ಕೀಳೆಂಬುದು ನಾವು ಕೈಗೊಳ್ಳುವ ಉದ್ಯೋಗಗಳಲ್ಲಿ ಇಲ್ಲ. ಅವರು ನಿರ್ವಹಿಸುವ ಮನೋಧರ್ಮದಲ್ಲಿದೆ. ವೃತ್ತಿಗಳಲ್ಲಿ ಕಾಯಕ ತತ್ತ್ವವನ್ನು ಅಳವಡಿಸಿಕೊಂಡಾಗ ಅವು ಸಾಧನೆಗೆ ಅಡ್ಡಿಯಾಗುವುದಿಲ್ಲವೆಂದು ಶರಣರು ಸಾರಿದ್ದರು. ಅಷ್ಟೇ ಅಲ್ಲ, ಆಚರಣೆಯಲ್ಲಿಯೂ ಸಾಧಿಸಿ ತೋರಿಸಿದರು. ತುರುಗಾಯಿ ರಾಮಣ್ಣ, ಸುಂಕದ ಬಂಕಣ್ಣ, ಮಾದಾರ ಧೂಳಯ್ಯ, ಹೂಗಾರ ಮಾದಯ್ಯ, ತಳವಾರಕಾಮಿದೇವ, ಗಾಣದ ಕನ್ನಪ್ಪ, ವೈದ್ಯ ಸಂಗಣ್ಣ, ಕೊಟ್ಟಣದ ದೆಮ್ಮವ್ವೆ, ಮೋಳಿಗೆ ಮಾರಯ್ಯ ಇವರೇ ಮೊದಲಾದ ಶರಣರು ಕಾಯಕ ಅನುಷ್ಠಾನದ ಸಾಕಾರ ಮೂರ್ತಿಗಳಾಗಿದ್ದಾರೆ. ಅವರ ಹೆಸರಿನ ಹಿಂದಿರುವ ವೃತ್ತಿ ಸೂಚಕಗಳು ಅವರು ಕೈಗೊಂಡ ಕಾಯುಕವನ್ನು ಸೂಚಿಸುತ್ತದೆ. ದನಕಾಯುವುದು, ದೋಣಿ ನಡೆಸುವುದು, ಗಾಣ ಆಡಿಸುವುದು, ಬುಟ್ಟಿ ಹೆಣೆಯುವುದು ಇವೇ ಮೊದಲಾದ ಉದ್ಯೋಗಗಳನ್ನು ಕೈಗೊಂಡ ಶರಣರು ಅನುಭವ ಮಂಟಪಕ್ಕೆ ಬಂದಾಗ ಪ್ರಧಾನ ಮಂತ್ರಿಯಾಗಿದ್ದ ಬಸವಣ್ಣನವರಿಗೆ ಸರಿಸಮಾನರಾಗಿ ಕುಳಿತು ಆಧ್ಯಾತ್ಮಿಕ ಚರ್ಚೆಯಲ್ಲಿ ಭಾಗವಹಿಸುತ್ತಿದ್ದುದು ವಿಶ್ವದ ಇತಿಹಾಸದಲ್ಲಿಯೇ ಮಹತ್ವಪೂರ್ಣವಾದುದು.

ಡಾ. ಸಿದ್ದಯ್ಯ ಪುರಾಣಿಕರು ಹೇಳಿರುವಂತೆ "ನಿಸ್ಪೃಹ ಚಕ್ರವರ್ತಿ ನುಲಿಯ ಚಂದಯ್ಯನವರು ತಮ್ಮ ನಿಜಕಾಯಕ ನಿಷ್ಠೆಯಿಂದ ನಿರ್ಭೀತ ವಿಚಾರ ಸರಣಿಯಿಂದ, ನಿರ್ಮಲವಾದ ನಡೆನುಡಿಗಳಿಂದ ನಿರಹಂಕಾರ ವೃತ್ತಿಯಿಂದ, ನಿಷ್ಕಲ್ಮಷ ಜೀವನದಿಂದ ನಿಜದ ರೂಪಾಗಿ ನಿಶ್ಶೇಷ ಕೀರ್ತಿಯನ್ನು ಗಳಿಸಿದ್ದಾರೆ. ಕೀರ್ತಿ ಕಾರ್ಯದಲ್ಲಿ ನಿಂತು ಮುಮುಕ್ಷುಗಳಿಗೆಲ್ಲ ಸಾರಿ ಸಾರಿ ಹೇಳುತ್ತಲಿದ್ದಾರೆ" ಎಂಬ ನುಡಿಗಳು ನುಲಿಯ ಚಂದಯ್ಯನವರ ಘನ ವ್ಯಕ್ತಿತ್ವಕ್ಕೆ ಭಾಷ್ಯ ಬರೆದಂತಿದೆ. ❑





# ಶರಣ ಸಾಹಿತ್ಯ ಮತ್ತು ಜಾನಪದ

– ಪ್ರೊ. ಹೆಚ್.ವಿ. ವೀರಭದ್ರಯ್ಯ *

*(ಕಳೆದ ಸಂಚಿಕೆಯಿಂದ)*

ಶರಣ ಸಿದಾಂತದ ಮೂರು ಮುಖ್ಯ ಲಕ್ಷಣಗಳು- ಅಷ್ಟಾವರಣ, ಪಂಚಾಚಾರ ಮತ್ತು ಷಟ್‌ಸ್ಥಲಗಳು. ಅಷ್ಟಾವರಣವೆ ರೂಪ, ಪಂಚಾಚಾರವೆ ಪ್ರಾಣ, ಷಟ್‌ಸ್ಥಲವೆ ಆತ್ಮವೆನ್ನುತ್ತದೆ ಶರಣ ಸಿದ್ಧಾಂತ. ಶರಣ ಸಾಹಿತ್ಯ ಅದನ್ನೇ ವಿವಿಧ ರೀತಿಯಲ್ಲಿ ಪ್ರತಿಪಾದಿಸಿದೆ. ಜನಪದ ಸಾಹಿತ್ಯದಲ್ಲೂ ಅಷ್ಟಾವರಣಗಳು ಸಹಜವಾಗಿ ಅರಳಿರುವುದನ್ನು ಮನಗಾಣಬಹುದು :

*ಶರಣೆಂಬೆ ಗುರುವಿಗೆ ಶರಣೆಂಬೆ ಶಿವನಿಗೆ*
*ಶರಣೆಂಬೆ ಶಿವನ ಮಡದಿಗೆ । ಗೌರಮ್ಮನಿಗೆ*
*ಶರಣೆಂದು ಕಲ್ಲ ಹಿಡಿದೇನ ॥*

ಎಂಬುದಾಗಿ ಗುರುವಿಗೆ ಶರಣೆನ್ನುತ್ತ ಕಾಯಕಕ್ಕೆ ಕೈ ಇಡುತ್ತದೆ. ಹಲವಾರು ರೀತಿಯಲ್ಲಿ ಗುರುಸ್ಮರಣೆ, ಗುರುಸ್ತುತಿ ಜಾನಪದದಲ್ಲಿ ವ್ಯಕ್ತವಾಗಿದೆ. ಲಿಂಗವನ್ನಂತೂ ಮನದುಂಬಿ ಹಾಡುತ್ತದೆ. ಲಿಂಗಯ್ಯ ಎಲ್ಲೆಲ್ಲೂ ಇದ್ದಾನೆ :

*ಹೂವಿನಾಗೆ ಹುದುಗ್ಯಾನ ಮಾಲ್ಯಾಗೆ ಮಲಗ್ಯಾನ*
*ಮೊಗ್ಗಾಗೆ ಕಣ್ಣ ತೆರೆದಾನ । ಲಿಂಗಯ್ಯನ*
*ನೋಡಟಿಗೆ ನಿದ್ದಿ ಬಯಲಾಗಿ ॥*

ಜಂಗಮದ ನೆನಪಂತೂ ಜಾನಪದದಲ್ಲಿ ನಿಚ್ಚಳವಾಗಿ ಕಾಣಬರುತ್ತದೆ. ಗುರು-ಲಿಂಗ-ಜಂಗಮದ ನೆನಪಿನಲ್ಲೇ ಜೀವನ ಸಾಗುತ್ತದೆ :

*ಲಿಂಗವ ನೆನೆದೇನೋ, ಜಂಗಮರ ನೆನೆದೇನೋ*
*ಲಿಂಗ ಜಂಗಮರ ನೆನೆದೇನೋ । ಕೈಲಾಸದ*
*ಶ್ರೀ ಗಂಗೆ ತಂಗವನ ನೆನೆದೇನೋ ॥*

ಎಂದು ಹಾಡುತ್ತದೆ. ಇಷ್ಟಲಿಂಗವನ್ನಂತೂ ಪ್ರಾಣಸಮಾನವಾಗಿ ಕಾಣಬೇಕೆನ್ನುವ ಜಾನಪದ ನಿಷ್ಠೆಯಿಲ್ಲದವರಿಗೆ ಇಷ್ಟಲಿಂಗವನ್ನು ಕೊಡಬೇಡವೆಂದು ಗುರುವನ್ನೇ ಬೇಡುವ ಚಿತ್ರ ಚೇತೋಹಾರಿಯಾದುದು :

*ಕಟ್ಟಿದ ಲಿಂಗವ ನೆಟ್ಟಗೂಟಕೆ ಹಾಕಿ*
*ನಿಟ್ಟುಸದೆ ಮನೆಯ ಕೆಲಸವನು ।*
*ಭ್ರಷ್ಟರಿಗೆ ಎನ್ನ ಕೊಡಬೇಡ ॥*

ಎಂದು ಗುರುವಿನಲ್ಲಿ ಅರಿಕೆ ಮಾಡಿಕೊಳ್ಳುತ್ತದೆ. ಹಳ್ಳಿಯ ಹೆಂಗಸರಲ್ಲಿ ಸೀರೆಯ ಸೆರಗಿಗೆ ಲಿಂಗವನ್ನು ಕಟ್ಟಿ ಸ್ನಾನಮಾಡುವ ಪದ್ಧತಿಯಿದ್ದಂತೆ ಕಾಣುತ್ತದೆ. ಹೆಣ್ಣೊಬ್ಬಳು ಹಾಗೆ ಮಾಡಿದ ಸಂದರ್ಭದಲ್ಲಿ ಇಷ್ಟಲಿಂಗವನ್ನು ಬಿಟ್ಟು ಬೇರೊಂದು ಸೀರೆಯುಟ್ಟು, ಲಿಂಗ ಕಟ್ಟಿದ ಬಟ್ಟೆಯನ್ನು ಮಡಿವಾಳನಿಗೆ ಹಾಕಿದ ಸನ್ನಿವೇಶವೊಂದನ್ನು ಇಲ್ಲಿ ನೋಡಬಹುದು :

*ಗೌರಿ ತನ್ನ ಲಿಂಗವನ್ನು ಸೀರೆ ಸೆರಗಲಿ ಕಟ್ಟಿ*
*ಸೀರೆ ಮಾಸಿದರೆ ಅಗಸನಿಗೆ ಹಾಕುಂಬ । ಮಾರಿಗೆ*
*ಎನ್ನ ಕೊಡಬೇಡ ।*

ಎಂಬ ಲಿಂಗದ ಬಗ್ಗೆ ಇದ್ದ ಅಲಕ್ಷ್ಯವನ್ನು ಪರಿಣಾಮಕಾರಿಯಾಗಿ ಚಿತ್ರಿಸುವುದಲ್ಲದೆ ಪ್ರೀತಿಯಿಲ್ಲದವರಿಗೆ ಲಿಂಗ ಕೊಡುವುದು ಬೇಡ ಎಂದು ಪ್ರಾರ್ಥಿಸುವ ಚಿತ್ರವಿದೆ :

*ನಂಜನಗೂಡು ಚೆಂದ ನಂದಿಕೋಲು ಚೆಂದ*
*ಈಬೂತಿ ಇಕ್ಕುವರ ಹಣೆ ಚೆಂದ । ಲೋಕದಲಿ*
*ಲಿಂಗ ಕಟ್ಟುವರ ಎದೆ ಚೆಂದ ॥*

*''ಕೂಡಲ ಸಂಗನ ಶರಣರಿಗೆ ನೊಸಲಿಗೆ ವಿಭೂತಿಯೇ ಶೃಂಗಾರ''*ವೆಂಬ ಬಸವಣ್ಣನವರ ಮಾತೇ ಸರಳ ಸುಂದರವಾಗಿ ಮರುಹುಟ್ಟು ಪಡೆದಿದೆ ಜಾನಪದದಲ್ಲಿ, ಅಂತೆಯೇ,

*ಪಾದತೀರ್ಥವ ಸೇವಿಸಿ ಪಾವನಾಯಿತು ಜನುಮ*
*ರೋಮರೋಮೆಲ್ಲ ರವಿ ಚಿನ್ನ । ಗುರುಗಳ*
*ಪಾದದಲಿ ಕಂಡೆ ಪರಶಿವನ ॥*

ಎಂಬುದಾಗಿ ಪಾದೋದಕದ ಮಹತ್ವವನ್ನು ಬಿತ್ತರಿಸುತ್ತದೆ. ಗುರುಗಳ ಪಾದದಲ್ಲಿ ಪರಶಿವನಿದ್ದಾನೆಂದು ನಂಬಿದೆ ಜಾನಪದ;

*ಮುಗ್ಧ ಶರಣರ ಹಾಡು ಸಿದಿ ಮಂತ್ರವು ನೋಡು*
*ಸಿದ್ಧಾಗು ಹಾಡ ಹಾಡುದಕೆ । ಎಲೆ ಜೀವ*
*ಶುದ್ಧಾಗಿ ಹೊಂದು ಶಿವಪದವ ॥*

ಎಂಬುದಲ್ಲದೆ ಶರಣ ಸಿದ್ಧಾಂತದಲ್ಲಿ ದುಡಿಮೆಯೇ ಮಂತ್ರ ವೆಂಬುದನ್ನು ಒತ್ತಿ ಹೇಳುತ್ತದೆ :

* ಸಂಪಾದಕರು, ಸಿದ್ಧಗಂಗಾ ಮಾಸಪತ್ರಿಕೆ, ಸಿದ್ಧಗಂಗಾ ಮಠ, ತುಮಕೂರು

*ಉತ್ತುವ ಬಿತ್ತುವ ಮಂತ್ರ, ಬಿತ್ತಿ ಬೆಳೆಯುವ ಮಂತ್ರ*
*ಸತ್ಯ ಶಿವಮಂತ್ರ, ನಿನ್ಹೆಸರು । ಬಸವಯ್ಯ*
*ಮರ್ತ್ಯದೊಳು ಮಂತ್ರ, ಜೀವನಕೆ ॥*

ಕಾಯಕಕ್ಕೆ ಜಾನಪದ ವಿಶೇಷ ಭಕ್ತಿ ಗೌರವಗಳನ್ನೇ ಅರ್ಪಿಸುತ್ತದೆ. ಜಾನಪದ ಅನುಸರಿಸದ ಮಂತ್ರ ಕೇವಲ ಗುರು-ಲಿಂಗ- ಜಂಗಮಕ್ಕೆ ಮಾಡುವ ಔಪಚಾರಿಕ ಸಾಂಪ್ರದಾಯಿಕ ಪೂಜೆಯಲ್ಲ. ಜೀವನವನ್ನು ಯೋಗವನ್ನಾಗಿ ಯೋಗವನ್ನೇ ಜೀವನವನ್ನಾಗಿ ಕಂಡದ್ದು.

ಡಾ. ಬಿ.ಎಸ್. ಗದ್ದಗಿಮಠರ ಸಂಪ್ರಬಂಧ **"ಕನ್ನಡ ಜಾನಪದ ಗೀತೆಗಳು"** ಗ್ರಂಥದ ಅನುಬಂಧದಲ್ಲಿ ಸಂಗ್ರಹಿಸಿರುವ ಕಲ್ಯಾಣ ಬಸವಯ್ಯ, ಹರಳಯ್ಯ, ಮಡಿವಾಳ ಮಾಚಯ್ಯ, ಕಿನ್ನರಿ ಬೊಮ್ಮಯ್ಯ, ಮೇದರ ಕೇತಯ್ಯ, ಇಳಿಹಾಳ ಬೊಮ್ಮಯ್ಯ, ಹೂಗಾರ ಮಾದಯ್ಯ, ಜಾತಿಗರ ಚೌಡಯ್ಯ, ನೇಗಿಯ ಅಮುಗಯ್ಯ, ಕುಂಬಾರ ಗುಂಡಯ್ಯ, ಮಾದರ ಚೆನ್ನಯ್ಯನವರ ಹಂತಿಯ ಹಾಡುಗಳನ್ನು ಗಮನಿಸಿದಾಗ ಶರಣ ಸಾಹಿತ್ಯದಲ್ಲಿ ಜಾನಪದ ಹೇಗೆ "ಸದ್ದುಗದ್ದಲವಿರದ" ಮೌನ ಸೇವೆಯನ್ನು ಸಲ್ಲಿಸಿದೆ ಎಂಬುದು ತಿಳಿಯದಿರದು.

ಜಾನಪದದ ಶ್ರವ್ಯರೂಪದ ಜನಪ್ರಿಯ ಪ್ರಕಾರಗಳಲ್ಲಿ ಒಂದು ಲಾವಣಿ. ಶರಣ ಸಾಹಿತ್ಯದಲ್ಲಿ ಲಾವಣಿ ಹಾಡುಗಳೂ ಉಂಟು. ಕೇವಲ ನಿದರ್ಶನಕ್ಕಾಗಿ ಈ ಒಂದನ್ನು ಇಲ್ಲಿ ಉದಾಹರಿಸಲಾಗಿದೆ. ಗುರುವಿನ ಮಹತ್ವವನ್ನು ಹೇಳುವ ಈ ಲಾವಣಿ ಹೀಗಿದೆ :

*ಗುರು ಅಲಕ್ ನಿರಂಜನ್ ನಿರವಯ ನಿರ್ಗುಣ ನಿಷ್ಕಲನೆನುತೆಲ್ಲಾ ।*
*ಪರಿಪರಿ ಯೋಗಾಭ್ಯಾಸ ಕಲಿಸಿದ ಹರಿಹರರಿಗೆ ಗುರು ದೊರೆಯಲಿಲ್ಲಾ ।*
*ಗುರು ದಿಗಂಬರ ಸ್ವರೂಪನು, ಅಂತೂ ಭವಸಾಗರ ದಾಂಟಿಪುದು ಬಲ್ಲಾ ।*
*ಗುರು ಪರಬ್ರಹ್ಮ ಪರಾತ್ಪರ ಪರಮಾತ್ಮ ಪರಂಜ್ಯೋತಿಯಾಗಿ ಮೆರೆಯುವನಲ್ಲಾ ।*

*ನೋಡುನೋಡು ಗುರು ಸತ್ಯಸಾಗರಾ ಆ ಗುರು ನಿತ್ಯ ನಿರಾಕಾರಾ ।*
*ನೋಡು ಗುರು ನಿರಹಂಕಾರಾ, ಗುರು ಮೃತ್ಯುಂಜಯ ಧೀರಾ ।*
*ಗುರು ಅಗಯ್ಯ ಅಗೋಚರ ಅಗಣಿತ ಅದ್ವಯ ಲೀಲಾಜಾಲವೆ ಮಯವಾಗಿದೆಯಲ್ಲಾ.*

ಅಲಕ್ ನಿರಂಜನನಾದ ಗುರುವಿನ ಆಶ್ರಯದಲ್ಲಿ ಎಲೆಮರೆಯ ಹೂವಿನಂತೆ ಅರಳಿದರು ಅಸಂಖ್ಯಾತರು. ಒಂದು ಸಂಸ್ಕೃತಿ ಸಾಧಿಸಬಹುದಾದ ಅತ್ಯುನ್ನತವಾದ ಎತ್ತರವನ್ನು ಅಂತಹ ವ್ಯಕ್ತಿಗಳಲ್ಲಿ ಕಂಡುಕೊಳ್ಳುತ್ತೇವೆ ಎಂಬ ಡಾ ॥ ಎಚ್. ತಿಪ್ಪೇರುದ್ರಸ್ವಾಮಿಯವರ ನುಡಿ ಯಥಾರ್ಥವೆನಿಸುತ್ತದೆ.

ಮದುವೆಯಲ್ಲಿ ಹಾಡುವ ಸೋಬಾನದ ಹಾಡುಗಳಲ್ಲಿ ಶರಣರನ್ನು ಸ್ಮರಿಸುತ್ತದೆ ಜಾನಪದ :

*ಸೋ ಅನ್ನು ಸಬುದವನು, ಯಾರು ಮಾಡ್ಯಾರು ಗುರುವೆ*
*ದೇವಗುರು ಚೆನ್ನಬಸವಣ್ಣ ಸೊಗಲದಾಗ*
*ಮಾದೇವನ ಮದುವೆ ಮಾಡಿದರ ॥ ಸೋ ॥*

ಗಾದೆಗಳು ವೇದಕ್ಕೆ ಸಮಾನವೆನ್ನುತ್ತಾರೆ. ಅಷ್ಟೇ ಅಲ್ಲ, ವೇದ ಸುಳ್ಳಾದರೂ ಗಾದೆ ಸುಳ್ಳಾಗದು ಎಂದೂ ಹೇಳುತ್ತಾರಲ್ಲವೆ? ಉದಾಹರಣೆಗಾಗಿ ಕೇವಲ ಒಂದನ್ನು ಗಮನಿಸೋಣ. "ಶಿವಪೂಜೆಯಲ್ಲಿ ಕರಡಿಗೆ ಬಿಟ್ಟಂತೆ". ಯಾವುದೇ ಕೆಲಸ ಮಾಡಬೇಕಾದರೂ ಮೂಲವನ್ನು ಮರೆಯಬಾರದಲ್ಲವೆ? ಕರಡಿಗೆಯಲ್ಲಿ ತಾನೆ ಇಷ್ಟಲಿಂಗವಿರುವುದು. ಅದನ್ನೇ ಬಿಟ್ಟು ಪೂಜೆಗೆ ಕುಳಿತರೆ ಹೇಗೆ?

ಧಾರ್ಮಿಕ ಜೀವನವನ್ನು ಕುರಿತ ಈ ಗಾದೆಗಳು ಶರಣ ಸಾಹಿತ್ಯ ಸಂಸ್ಕೃತಿಯಲ್ಲಿ ಅರಳಿರುವ ಅನುಭವದ ಹೂವಾಗಿರುವುದನ್ನು ಕಾಣಬಹುದು. "ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೆ ಮೇಲು", "ಕೃಷಿಕೃತ್ಯ ಕಾಯಕ"ವೆಂಬ ಬಸವಣ್ಣನವರ ವಾಣಿಯನ್ನು ನೆನಪಿಗೆ ತರುತ್ತದೆ. "ಲಿಂಗಕ್ಕೆ ಹೊಲೆಯಿಲ್ಲ, ಗಂಗೆಗೆ ಮಡಿಯಿಲ್ಲ". ಲಿಂಗದೇಹಿ ಸದಾ ಶುಚಿ ಎಂಬುದನ್ನು ಒತ್ತಿ ಹೇಳುತ್ತದೆ. *"ಶರಣನ ಗುಣ ಮರಣದಲ್ಲಿ ನೋಡು; ತ್ಯಾಗಿಯ ಗುಣ ಭೋಗದಲ್ಲಿ ನೋಡು", "ಅಳಿಯುವುದು ಕಾಯ, ಉಳಿಯುವುದು ಕೀರ್ತಿ", "ಯಾರಿಗೆ ಯಾರಿಲ್ಲ, ದಾರಿಗೆ ಸಂಗಾತಿಯಲ್ಲ", "ಆರಿಗಾರು ಇಲ್ಲ ಕೆಟ್ಟವಂಗೆ ಕೆಳೆಯಲ್ಲ"* ಎಂಬ ಬಸವಣ್ಣನವರ ಮಾತು ನೇರವಾಗಿಯೇ ಜಾನಪದದಲ್ಲಿ ಮತ್ತೆ ಹುಟ್ಟಿ ಬಂದಿದೆ. "ಹೊರಗೆ ಭಕ್ತಿ, ಒಳಗೆ ಕತ್ತಿ", "ತುದಿ ನಾಲಗೆ ಬೆಲ್ಲಂ ಭೋ ಹೃದಯದೊಳಗೆ ಕತ್ತರಿ", "ಚರ್ಮ ತೊಳೆದರೆ ಕರ್ಮ ಹೋದೀತೆ", "ತೊರೆವ ಮೀವಣ್ಣಂಗಳಿರಾ ತೊರೆಯಿಂ ಭೋ ಪರಧನವ" ವಚನೋಕ್ತಿಯ ಮರು ರೂಪವಾಗಿದೆ. "ಸಮುದ್ರದ ಉಪ್ಪು ಕಾಡಿನ ನೆಲ್ಲಿಕಾಯಿ" – ಬೆಟ್ಟದ ನೆಲ್ಲಿಕಾಯಿ ಸಮುದ್ರದ ಉಪ್ಪು ಎಂಬ ಅಲ್ಲಮಪ್ರಭುವಿನ ವಚನ ನೆನಪಾಗದೆ? "ಲಿಂಗ ಹಿಡಿದ ಮೇಲೆ ಜಂಗಮದ ಹಂಗೇನು?", *"ನೂರಕ್ಕೊಬ್ಬ ದಾನಿ, ಸಾವಿರಕ್ಕೊಬ್ಬ ಶರಣ", ಲಕ್ಷಕ್ಕೊಬ್ಬ ಭಕ್ತ, ಕೋಟಿಗೊಬ್ಬ ಶರಣ, "ಸಿದ್ಧಂಗೆ ಊಟ, ಶಿವಂಗೆ ನೋಟ"*, ಇಲ್ಲಿ ವ್ಯಕ್ತವಾಗಿರುವ ಜಾನಪದದ ಅನುಭವ ಅಪಾರವಾದುದು.

ಒಗಟುಗಳೂ ಶರಣ ಸಂಸ್ಕೃತಿಯನ್ನು ಬಿತ್ತರಿಸುತ್ತವೆ. ಅದಕ್ಕೊಂದು ಉದಾಹರಣೆ – ಬಂಗಾರದ ಕರಡಿಗೆಯಲ್ಲಿ ಬೆಳ್ಳಿಯ ಲಿಂಗ" – ಹಸಲಿನ ತೊಳೆಯ ಮತ್ತು ಅದರಲ್ಲಿರುವ





ಬೀಜ ಎಂಬುದು ಉತ್ತರ.

ಕೋಲಾಟದ ಪದಗಳಲ್ಲಿ ಶರಣಧರ್ಮದ ಅಂಶಗಳಿರುವುದನ್ನು ಪರಿಶೀಲಿಸಬಹುದು.

ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು ನಾಯಕನಹಟ್ಟಿ ಒಂದು ಸುಪ್ರಸಿದ ಶರಣಕ್ಷೇತ್ರ, ಗುರು ತಿಪ್ಪೇರುದ್ರಸ್ವಾಮಿ ನೆಲೆನಿಂತ ಧರ್ಮಭೂಮಿ. ಲೀಲಾಮೂರ್ತಿಯಾದ ತಿಪ್ಪೇಸ್ವಾಮಿಯನ್ನು ಜಾನಪದ ದಲ್ಲಿ ಕೋಲಾಟದ ಪದಗಳು ಕೊಂಡಾಡುತ್ತಿವೆ :

*ಕೋಲನ್ನ ಕೋಲನ್ನ ಕೋಲೆ । ಸಿರಿಗಂಧದ । ಕೋಲನ*
*ಕೋಲನ್ನ ಕೋಲೆ*
*ಹಟ್ಟೀನೆ ತಿಪ್ಪೇಶ ಸತ್ಯವುಳ್ಳನು ಕಣೆ*
*ಸತ್ತೆಮ್ಮೆ ಹಾಲ ಕರೆದಾನೆ । ತಿಪ್ಪೇಸ್ವಾಮಿ*
*ಹಟ್ಟಿ ಒಳ್ಳೇದೆಂದು ನೆಲೆಗೊಂಡ ॥ ಕೋಲನ್ನ ಕೋಲೆ*

ಮಾನೌಮಿ ಪದಗಳು ಜಾನಪದದ ಪ್ರಕಾರಗಳಲ್ಲಿ ಒಂದಾಗಿದ್ದು, ಶಾಲಾ ಚಿಣ್ಣರನ್ನು ಮಾಸ್ತರರೆನಿಸಿಕೊಂಡಾತ ಗ್ರಾಮದ ಮನೆಮನೆಗಳ ಮುಂದೆ ಕರೆದುಕೊಂಡು ಹೋಗಿ ಮಕ್ಕಳಿಂದ ಹಾಡಿಸುತ್ತಿದ್ದ ಸಂಪ್ರದಾಯವೇ ಮಾನೌಮಿ ಪದಗಳು. ಶರಣ ಸಂಸ್ಕೃತಿಯನ್ನು ಅಲ್ಲಿಯೂ ಗುರುತಿಸಬಹುದಾಗಿದೆ :

*ಶಿವಪೂಜೆಮಾಡ್ವಲ್ಲಿ ಬಲ್ಲಸುತನಾಗು ।*
*ಶಿವಸ್ತೋತ್ರ ಕೇಳ್ವಲ್ಲಿ ಗಿರಿರಾಜನಾಗು ॥*
*ಶಿವಶರಣ ಕಾಂಬಲ್ಲಿ ಸುರಪತಿಯೆ ಆಗು ।*
*ಶಿವನ ಕರುಣದಿ ಕೃಪೆಯನುಳ್ಳಾತನಾಗು ॥*

ಎಂದು ಹಾರೈಸುವ ಶಾಲಾ ಮಕ್ಕಳ ನುಡಿಗಳಲ್ಲಿ ಶಿವಪೂಜೆ, ಶಿವಸ್ತೋತ್ರ, ಶಿವಚರಣ, ಶಿವಕರುಣ ದೊರೆಯಲಿ ಎಂಬ ಸದ್ಭಾವನೆಯಿದೆ. ಅಂತೆಯೇ

*ನಾಯೆಂಬ ಅಕ್ಷರವನೊಂದು ಬಿಡಬೇಕು*
*ನೀನೆಂಬ ಅಕ್ಷರವ ಉಚ್ಚರಿಸಬೇಕು*
*ಇಂತೆಂಬ ನೀತಿಯನ್ನು ನೀವರಿಯಬೇಕು*
*ಶಂಭು ಪರಮೇಶ್ವರನ ದಯ ಬೇಕೇ ಬೇಕು ॥*

ಎನ್ನುವ ಹಾಡಿನಲ್ಲಿ ಅಹಂಕಾರ ತ್ಯಾಗದ ಅವಶ್ಯಕತೆಯನ್ನು ಹೇಳುವುದರ ಜೊತೆಗೆ 'ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ' ಎಂಬ ವಿನಯಾದರ್ಶನದ ಚಿತ್ರವಿದೆ.

*ಲಿಂಗವಂತರ ನೆನೆಯಬೇಕಣ್ಣ*
*ಮೂಡಲ ಕೆಂಪು ಹರಿಯುವ ಮುನ್ನ*
*ಎದೆಯ ಮೇಲಣ ಲಿಂಗವ ಪೂಜಿಪ*
*ಲಿಂಗವಂತರ ನೆನೆಯಬೇಕಣ್ಣ ॥*

ಚಳ್ಳಕೆರೆ ಬಳಿ ರಾತ್ರಿಯ ವೇಳೆ ಬೆಳದಿಂಗಳ ಬೆಳಕಿನಲ್ಲಿ ಕೋಲು ಹಾಕುತ್ತಿದ್ದ ತಂಡದವರು ಹಾಡುತ್ತಿದ್ದುದನ್ನು ಕಂಡು ವಿಚಾರಿಸಿದಾಗ ಹಾಡುತ್ತಿದ್ದವರು ಗೊಲ್ಲ ಸಮಾಜ ಬಂಧುಗಳೆಂದು ತಿಳಿದುಬಂದಿತು.

ಬೀಸುವ ಕಲ್ಲಿನ ಮೇಲೆ ಮೂಡಿಬಂದ ಶರಣ ಸಂಸ್ಕೃತಿಯ ಜಾನಪದ ಅಪಾರವಾಗಿದೆ. "ಕಲ್ಲೂಡಿ ನೆನೆದೇನ ಕಲ್ಯಾಣ ದಯ್ಯನ" ಎಂದೇ ಬಾಯಿತೆರೆಯುವ ಗ್ರಾಮೀಣ ಗರತಿ "ಮಧ್ಯ ರಾತ್ರೀಲಿ ಎದ್ದು ಬೀಸವರ್‍ಯಾರೆ । ಸಿದರ ಮಡದಿ ಶಿವಶರಣೆ । ನೀಲಮ್ಮ ಮಧ್ಯರಾತ್ರೀಲಿ ಬೀಸ್ಯಾಳ" ಎಂದು ನೀಲಾಂಬಿಕೆಯೂ ಬೀಸಿದಳು, ಕಾಯಕಕ್ಕೆ ಅರ್ಪಿಸಿಕೊಂಡಳು ತನ್ನನ್ನೂ ಎನ್ನುತ್ತದೆ.

ಜಾನಪದದ ದೃಷ್ಟಿ ಭವ್ಯವಾದುದು. ಅಲ್ಪಕ್ಕೆ ಆತುವರಿಯಲಿಲ್ಲ. ಅದು ಭೂಮವನ್ನೇ ಆರಾಧಿಸಿತು. ತನ್ನ ತಂದೆ ತಾಯಿ ಬಂಧು ಬಳಗ ತೌರು ಯಾರೆಂಬುದನ್ನು,

*ಹರನೆ ನನ್ನಯ ತಂದೆ ಗಿರಿಜೆ ನನ್ನಯ ತಾಯಿ*
*ಶರಣರೆ ನನ್ನ ಬಳಗವು । ಕೈಲಾಸ*
*ಗಿರಿಯೆ ಕಾಣಕ್ಕ ತೌರೂರು ॥*

ಎಂದು ದೃಢಪಡಿಸುತ್ತದೆ. ತಾನು ಜೀವನವನ್ನು ಪ್ರೀತಿಸುತ್ತದೆ. ಇಲ್ಲಿ ಸಲ್ಲುವಂತೆ ಬಾಳಲಾಶಿಸುತ್ತದೆ.

*ಮಾಳಿಗೆ ಮನೆಬೇಕು ಜೋಳಿಗೆ ಹಣಬೇಕು*
*ಬಸವಣ್ಣನಂಥಾ ಮಗು ಬೇಕು ॥ ನಮ್ಮನಿಗೆ*
*ನೀಲಮ್ಮನಂಥಾ ಸೊಸಿ ಬೇಕು ॥*

ಎಂದು ಸುಂದರ ಕೌಟುಂಬಿಕ ಜೀವನವನ್ನಾಶಿಸುತ್ತದೆ. ಅಲ್ಲದೆ ಇರುವಷ್ಟು ದಿನ "ಲೇಸೆನಿಸಿಕೊಂಡು" ಬದುಕುವ ಅಪೇಕ್ಷೆಯನ್ನು ವ್ಯಕ್ತಪಡಿಸುತ್ತದೆ.

*ಲೋಕದಾಗಿರುತನಕ ಬೇಕಾಗಿ ಇರಬೇಕು*
*ಸಾಕಾಗಿ ಶಿವನ ಸದರೀಗೆ ಹೋದಾಗ । ಎಲ್ಲಾರು*
*ಬರುತಾರ ಕಳಿಸಾಕ ॥*
*ಮಂದಿ ಮಕ್ಕಳೊಳಗ ಚೆಂದಾಗೊಂದಿರ ಬೇಕ*
*ನಂದಿಯ ಶಿವನ ದಯದಿಂದ । ಹೋಗಾಗ*
*ಮಂದಿ ಬಾಯಾಗ ಇರಬೇಕ ॥*

ಎಂದು ಜೀವನದ ಸಾರ್ಥಕತೆ "ಇಲ್ಲಿ ಸಲ್ಲುವುದಾಗಬೇಕು" ಎನ್ನುತ್ತದೆ. ಹಾಗೆಯೇ ಸಲ್ಲುವ ಬದುಕಾಗಬೇಕಾದರೆ "ಶೀಲ" ಮುಖ್ಯ ಎಂಬುದನ್ನು ಸ್ಪಷ್ಟಪಡಿಸುತ್ತದೆ.

*ಸೀತಾಳೆ ಕೊಡಪಾನ ಶಿವಮೊಗ್ಗಿ ಪಾವುಡ*
*ಶೀಲವಂತವ್ವ ತನ್ನ ತಂಗಿ । ಬರುವಾಗ*
*ಶಿವ ತನ್ನ ಸದರ ಬಿಟ್ಟಿಳಿದಾನ ॥*

ಎನ್ನುವಲ್ಲಿ ಶೀಲವಂತರಿಗೆ ಶಿವನೂ ಎದ್ದು ನಿಂತು ಗೌರವ ತೋರಿಸುತ್ತಾನೆಂಬುದನ್ನು ಮನಗಾಣಿಸುತ್ತದೆ. ಕೊನೆಗೆ ಲಿಂಗಪೂಜೆಗೆ ಕುಳಿತಾಗ ಕರಸ್ಥಲದ ಜ್ಯೋತಿಯನ್ನು ಬೇಡುವುದಾದರೂ ಏನನ್ನು? –

*ಅಂಗೈಯ ಒಳಗೀನ ಲಿಂಗ ಮೂರುತಿಸ್ವಾಮಿ*
*ಮಂಗಳಾರತಿ ನಾ ಬಳಗಿ ಬೇಡುವೆನು*
*ಮಾರಾಯರ ಮುಂದೆ ಮರಣಾವ ॥*

ಮರಣವನ್ನು ಬೇಡುವಷ್ಟು ಎತ್ತರಕ್ಕೆ ನಡೆದಿದೆ ಜಾನಪದ. ಶರಣ ಸಂಸ್ಕೃತಿಯನ್ನು ಕಂಡುಂಡು. ಹುಟ್ಟು ಸಾವನ್ನು ಸಮದೃಷ್ಟಿಯಲ್ಲಿ ಕಾಣುತ್ತದೆ ಜಾನಪದ. ಕೇಳುತ್ತದೆ :

*ನಿದ್ದೆಗೆ ಮದ್ದುಂಟೆ ಬುದಿಗೆ ಕರೆಯುಂಟೆ*
*ವಿದ್ಯ ಬಲ್ಲವಗೆ ಕೇಡುಂಟೆ । ಶಿವರಾಯ*
*ಮುದ್ದುಂಟೆ ಜನನ ಮರಣಕ್ಕೆ ॥*

ಎಂದು ಪ್ರಶ್ನಿಸುತ್ತ ಹೌದು ಮದ್ದಿಲ್ಲ ಜನನ ಮರಣಗಳಿಗೆನ್ನುತ್ತದೆ.

*ದೇವರ ನೆನೆದಾರೆ ಸಾ ಹುಟ್ಟು ನಮಗಿಲ್ಲ*
*ಹಾವು ಕಚ್ಚಿದರೂ ಭಯವಿಲ್ಲ । ಸರ್ಪಾನ*
*ಹೆಡೆಯ ದಾಟಿದರೂ ಭಯವಿಲ್ಲ.*

ಎಂದು ಉತ್ತರಿಸುತ್ತದೆ; ಬದುಕಿಗೆ ಭರವಸೆಯನ್ನೀಯುತ್ತದೆ.

ಶರಣ ಧರ್ಮ ಶರಣಸಾಹಿತ್ಯದ ಮೂಲಕ ಉಳಿದು ಬಂದಿರುವಂತೆ, ಜಾನಪದಲ್ಲಿಯೂ ಉಳಿದು ಬಂದಿರುವುದನ್ನಿಲ್ಲಿ ಪರಿಶೀಲಿಸಿದ್ದಾಯಿತು. ಪರಂಪರೆಯಿಂದ ಬಂದ ಜೀವನ ಆಸ್ಥೆಯೂ ಜಾನಪದದ ಊರೆಗೋಲು. ''ಒಂದು ಜನಾಂಗದ ಸಂಸ್ಕೃತಿಯ ಒರೆಗಲ್ಲು, ಕಲಿತ ನಾಲ್ಕಾರು ಜನ ಪಂಡಿತರಲ್ಲ, ಕಲಿಯದ ಸಾವಿರಾರು ಜನ. ಜೀವನದ ಉದಾತ್ತ ಆದರ್ಶಗಳೂ ಸಾರ್ಥಕವಾಗಬೇಕಾದರೆ ಸಾಮಾನ್ಯ ಜನ ಜೀವನವನ್ನು ಅವು ಮುಟ್ಟಿ ಅವರ ಬಾಳನ್ನು ಹಸನುಗೊಳಿಸಬೇಕು. ಅಂತಹ ಸಾರ್ಥಕತೆಯನ್ನು ಕರ್ನಾಟಕ ಸಾಧಿಸಿ ಕೊಂಡಿದೆಯೆಂಬುದಕ್ಕೆ ಅದರ ಜನಪದ ಸಾಹಿತ್ಯವೇ ಸಾಕ್ಷಿಯಾಗಿದೆ'' ಎಂಬ ಡಾ ॥ ಎಚ್. ತಿಪ್ಪೇರುದ್ರಸ್ವಾಮಿಯವರ ಹೇಳಿಕೆಯಂತೆ ಶರಣ ಸಾಹಿತ್ಯ ದಲ್ಲಿ ಜಾನಪದ ಮೈತೆರೆದುಕೊಂಡಿರುವುದನ್ನು ಕಾಣಬಹುದು.

''ಶರಣ ಸಾಹಿತ್ಯದಲ್ಲಿ ಜಾನಪದ'' ಎಂಬುದು ವ್ಯಾಪಕವಾದುದು. ಇಲ್ಲಿ ವಿಸ್ತಾರವಾದ ಹಿನ್ನೆಲೆಯನ್ನೇನೂ ನಿರ್ಮಿಸಿಕೊಳ್ಳದೆ, ಪ್ರಕೃತ ಸಂದರ್ಭಕ್ಕನುಗುಣವಾಗಿ ಕೆಲವು ಗೀತೆಗಳನ್ನು ನೋಡುವುದರ ಮೂಲಕ ಜನತೆಯ ಸಮಷ್ಟಿ ಮನಸ್ಸಿಗೆ ಒಂದು ನೋಟವನ್ನು ಗಮನಿಸಲಾಗಿದೆ. *

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಸದಸ್ಯರಾಗಿರುವುದು ಸಂತೋಷ. ಇದರಿಂದ **'ಸಿದ್ಧಗಂಗಾ'** ನಿರಂತರವಾಗಿ ನಿಮ್ಮ ಮನ-ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಕಾಗದ, ಮುದ್ರಣ, ಅಂಚೆ ವೆಚ್ಚ ಇನ್ನಿತರೆ ವೆಚ್ಚಗಳು ದುಬಾರಿಯಾಗಿದ್ದು, ಪತ್ರಿಕೆ ಮುನ್ನಡೆಸಲು ಕಷ್ಟವಾಗಿದೆ.

ಪ್ರಾರಂಭಕ್ಕೆ ೫೦೦/- ರೂ, ೧೦೦೦/-ರೂ ಆಜೀವ ಸದಸ್ಯರಾಗಲು ಚಂದಾ ಸಂದಾಯ ಮಾಡಿದ್ದಿರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/- ರೂ, ೧೦೦/- ಮಾತ್ರ, ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಮುದ್ರಣ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಕೊರತೆಯನ್ನು ದಯವಿಟ್ಟು ಅರ್ಥಮಾಡಿಕೊಳ್ಳುವಿರೆಂದು ಭಾವಿಸಿದ್ದೇವೆ.

**ಪ್ರಸ್ತುತ ಆಜೀವ ಚಂದಾ ೨೦೧೪ ವರ್ಷದಿಂದ ೧೫೦೦/- ರೂ ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/- ರೂ ಸಂದಾಯ ಮಾಡಿರುವವರು ಬಾಕಿ ೧೦೦೦/- ರೂ ಸಂದಾಯ ಮಾಡಬೇಕು. ೧೦೦೦/- ರೂ ಸಂದಾಯ ಮಾಡಿರುವವರು ಬಾಕಿ ೫೦೦/- ಸಂದಾಯ ಮಾಡಲು ಕೋರಿದೆ.**

ನಿಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತ **ಸಿದ್ಧಗಂಗಾ ಮಾಸಪತ್ರಿಕೆ** ಹೆಸರಿನಲ್ಲಿ ನಗದು/ಚೆಕ್/ಡಿ.ಡಿ. ಮೂಲಕ ತಪ್ಪದೆ ಪತ್ರಿಕೆ ಆಜೀವ ಸದಸ್ಯತ್ವದ LM ಸಂಖ್ಯೆ ಸೂಚಿಸಿ ದೂರವಾಣಿ/ಮೊಬೈಲ್ ನಂಬರ್ ನೊಂದಿಗೆ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ, **'ಸಿದ್ಧಗಂಗಾ'** ಮುನ್ನಡೆಗೆ ಬಾಕಿ ಹಣ ಸಂದಾಯ ಮಾಡಿ ಸಹಕರಿಸಬೇಕಾಗಿ ಕಳಕಳಿಯಿಂದ ಪ್ರಾರ್ಥಿಸುತ್ತೇವೆ.

ಪ್ರಕಾಶಕರು, 'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪.
ದೂರವಾಣಿ : 0816-2282322







# ಬೆಂಗಳೂರಿನ ಹೇರೋಹಳ್ಳಿ ವೀರಶೈವ ಕ್ಷೇಮಾಭಿವೃದ್ಧಿ ಸಂಘದ ವತಿಯಿಂದ ಬಸವೇಶ್ವರ ಜಯಂತಿ ಆಚರಣೆ

– ಆರ್. ಬಾಲರಾಜು *

ಹೇರೋಹಳ್ಳಿ ವೀರಶೈವ ಕ್ಷೇಮಾಭಿವೃದ್ಧಿ ಸಂಘದ ವತಿಯಿಂದ ಜೂನ್ ೧೯ ರಂದು ಬಸವ ಜಯಂತೋತ್ಸವ ಸಮಾರಂಭವನ್ನು ಅರ್ಥಪೂರ್ಣವಾಗಿ ಆಚರಿಸಲಾಯಿತು. ಅಂದು ಬೆಳಿಗ್ಗೆ ೮-೩೦ ಗಂಟೆಗೆ ಎಸ್.ವಿ. ಆಂಗ್ಲಶಾಲೆಯ ಆವರಣದಲ್ಲಿ ಷಟ್ಸಲ ಧ್ವಜಾರೋಹಣವನ್ನು ಸಂಘದ ಗೌರವಾಧ್ಯಕ್ಷರು, ಅಧ್ಯಕ್ಷರು, ಕಾರ್ಯದರ್ಶಿಗಳು ಹಾಗೂ ಪದಾಧಿಕಾರಿಗಳು ಮತ್ತು ಸದಸ್ಯರ ಸಮ್ಮುಖದಲ್ಲಿ ನೆರವೇರಿಸಲಾಯಿತು. ನಂತರ ಜನಪದ ಕಲೆಗಳಾದ ವೀರಗಾಸೆ, ಡೊಳ್ಳುಕುಣಿತ, ಕರಡಿ ಕುಣಿತ ಮತ್ತು ಮಂಗಳವಾದ್ಯಗಳೊಂದಿಗೆ ಅಶ್ವಾರೂಢ ಶ್ರೀ ಬಸವೇಶ್ವರ ಪುತ್ಥಳಿಯ ಮೆರವಣಿಗೆಗೆ ಚಾಲನೆ ದೊರೆಯಿತು. ಈ ಅದ್ದೂರಿ ಮೆರವಣಿಗೆಯಲ್ಲಿ ಹಿರಿಯರು, ಸಾಹಿತಿಗಳು, ಅಭಿಮಾನಿಗಳು ಭಕ್ತರು ಭಾಗವಹಿಸಿದ್ದರು. ಮಹದೇಶ್ವರನಗರದ ಮುಖ್ಯರಸ್ತೆಯ ಮೂಲಕ ಕೆ.ಎಸ್.ಆರ್.ಟಿ.ಸಿ. ಬಡಾವಣೆ, ವೆಂಕಟೇಶ್ವರ ಬಡಾವಣೆ, ತುಂಗಾನಗರ, ಅಂಜನಾನಗರ, ಪುರಾತನ ಪ್ರಸಿದ್ಧ ಹೇರೋಹಳ್ಳಿ ಶ್ರೀ ಆಂಜನೇಯ ಸ್ವಾಮಿಯ ದೇವಸ್ಥಾನದ ಮಾರ್ಗವಾಗಿ ಎಸ್.ವಿ. ಶಾಲೆಯನ್ನು ತಲುಪಿತು. ಎರಡು ಗಂಟೆಗಳ ಕಾಲ ನಡೆದ ಮೆರವಣಿಗೆಯ ದೃಶ್ಯವನ್ನು ರಸ್ತೆಯ ಇಕ್ಕಡೆಗಳಲ್ಲಿ ನಿಂತು ಸಾವಿರಾರು ಜನ ಭಕ್ತರು, ಅಭಿಮಾನಿಗಳು ಕಣ್ತುಂಬಿಸಿಕೊಂಡರು.

ಮೆರವಣಿಗೆಯ ನಂತರ ೧೧.೩೦ಕ್ಕೆ ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಕರ್ನಾಟಕದ ಮಾಜಿ ಮುಖ್ಯಮಂತ್ರಿಗಳು ಹಾಗೂ ಕೇಂದ್ರ ಸಚಿವರಾದ ಶ್ರೀ ಡಿ.ವಿ. ಸದಾನಂದಗೌಡರು ಜ್ಯೋತಿ ಬೆಳಗಿಸಿ ಸಮಾರಂಭವನ್ನು ಉದ್ಘಾಟಿಸಿ ಶ್ರೀ ಬಸವೇಶ್ವರರ ಸಾಮಾಜಿಕ, ಧಾರ್ಮಿಕ ಕಳಕಳಿಯ ಬಗ್ಗೆ ಮಾತನಾಡಿ, ಶರಣರ ಕಾಯಕನಿಷ್ಠೆ ಇಂದಿನ ಸಮಾಜಕ್ಕೆ ಮಾದರಿಯಾಗ ಬೇಕಾಗಿದೆ ಎಂದರು. ಸಮಾರಂಭದ ಅಧ್ಯಕ್ಷತೆಯನ್ನು ಸಂಘದ



ಮಂಗಳ ಕಳಸಗಳೊಂದಿಗೆ
ಬಸವೇಶ್ವರ ಪುತ್ಥಳಿಯ ಭವ್ಯ ಮೆರವಣಿಗೆ

* ಮುಖ್ಯ ಶಿಕ್ಷಕರು, ಶ್ರೀ ಸರ್ವಜ್ಞ ಪ್ರೌಢಶಾಲೆ, ವಿಜಯನಗರ, ಬೆಂಗಳೂರು-೫೬೦೦೪೦

ಗೌರವಾಧ್ಯಕ್ಷರಾದ ಶ್ರೀ ತ್ರಿಪುರಾಂತಕಮೂರ್ತಿ (ರೇಣುಕಪ್ಪ) ರವರು ವಹಿಸಿದ್ದರು.

ಉಪನ್ಯಾಸಕರಾಗಿ ಆಗಮಿಸಿದ್ದ ಪ್ರೊ. ಎಂ. ಪ್ರಸನ್ನಕುಮಾರ್‌ರವರು "ವೀರಶೈವ ಧರ್ಮದ ಪವಿತ್ರ ಗ್ರಂಥ ವಚನಗಳು, ಇವುಗಳ ಮೌಲ್ಯವನ್ನು ನಾವು ಅರಿಯಬೇಕಿದೆ. ಶರಣರ ಜೀವನ ತತ್ವಗಳನ್ನು ಬದುಕಿನುದ್ದಕ್ಕೂ



ಅಶ್ವರೂಢ ಶ್ರೀ ಬಸವೇಶ್ವರ ಪುತ್ಥಳಿಯ ಮುಂದೆ ಸಂಘದ ಪದಾಧಿಕಾರಿಗಳು ಹಾಗೂ ಭಕ್ತರು

ಅಳವಡಿಸಿಕೊಳ್ಳಬೇಕು" ಎಂದರಲ್ಲದೆ 'ಕಳ್ಳನ ಮನೆಗೊಬ್ಬ ಮಹಾಕಳ್ಳಬಂದ' ಎಂಬ ವಚನದ ಸಾಲನ್ನು ಉಲ್ಲೇಖಿಸುತ್ತಾ ಆ ಸಂದರ್ಭದಲ್ಲಿ ನಡೆದ ಘಟನೆಯನ್ನು ಸ್ವಾರಸ್ಯಕರವಾಗಿ ಮನವರಿಕೆ ಮಾಡಿಕೊಟ್ಟರು.

ಮತ್ತೋರ್ವ ಉಪನ್ಯಾಸಕರಾದ ಶ್ರೀ ಬ್ಯಾಡನೂರ ಶಾಂತವೀರಪ್ಪನವರು 'ದೇವನೊಬ್ಬ ನಾಮ ಹಲವು' ಎಂದು ತಿಳಿಸಿ, ಏಕದೇವೋಪಾಸನೆಯನ್ನು ಪ್ರತಿಯೊಬ್ಬರು ಪಾಲಿಸಿದಾಗ ಪರಿಸರ ಮಾಲಿನ್ಯವನ್ನು ತಡೆಗಟ್ಟಬಹುದು



ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರ ಸಾನ್ನಿಧ್ಯದಲ್ಲಿ ಕೇಂದ್ರ ಸಚಿವ ಶ್ರೀ ಡಿ.ಬಿ. ಸದಾನಂದಗೌಡ ಅವರಿಂದ ಕಾರ್ಯಕ್ರಮದ ಉದ್ಘಾಟನೆ.



ಸಂಘದ ವತಿಯಿಂದ ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಭಕ್ತಿ ಸಮರ್ಪಣೆ.

ಹಾಗೂ ಸ್ವಚ್ಛತೆಯನ್ನು ಕಾಪಾಡಬಹುದು. ಸ್ವಚ್ಛತೆಯಿಂದ ಸ್ವಸ್ಥ ಆರೋಗ್ಯ ನಿರ್ಮಾಣ ಮಾಡಲು ಸಾಧ್ಯವಾಗುತ್ತದೆ' ಎಂದು ಹೇಳಿದರು.

ಕಳೆದ ನಲವತ್ತು ವರ್ಷಗಳಿಂದ ಪತ್ರಿಕೆ, ಸಾಹಿತ್ಯ ಹಾಗೂ ಜಾನಪದ ಕ್ಷೇತ್ರದಲ್ಲಿ ಸೇವೆ ಸಲ್ಲಿಸುತ್ತಿರುವ ಜಾನಪದ ವಿದ್ವಾಂಸರಾದ ಶ್ರೀ ಎಚ್.ಎಸ್. ಸಿದ್ಧಗಂಗಪ್ಪನವರು ಸಲ್ಲಿಸಿದ ಅನುಪಮ ಸೇವೆಯನ್ನು ಮನಗೊಂಡು ವೀರಶೈವ ಕ್ಷೇಮಾಭಿವೃದ್ಧಿ ಸಂಘ ಬಸವ ಜಯಂತಿ ಆಚರಣೆಯ ಶುಭ ಸಂದರ್ಭದಲ್ಲಿ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ,



ಉದ್ಯಮಿ ಶ್ರೀ ಕೆ.ಟಿ. ನಿರಂಜನ್ ಅವರಿಗೆ ಪರಮಪೂಜ್ಯ ಶ್ರೀ ಶ್ರೀಗಳವರಿಂದ ಸನ್ಮಾನ.

ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ತಮ್ಮ ಶಿವಹಸ್ತದಿಂದ ಸನ್ಮಾನಿಸಿ ಆಶೀರ್ವದಿಸಿದರು.

ಸನ್ಮಾನಕ್ಕೆ ಕೃತಜ್ಞತೆಗಳನ್ನು ಸಲ್ಲಿಸಿ ಮಾತನಾಡಿದ ಶ್ರೀ ಎಚ್.ಎಸ್. ಸಿದ್ಧಗಂಗಪ್ಪನವರು ಒಂಭೈನೂರು ವರ್ಷಗಳು ಕಳೆದರೂ ನಾವಿನ್ನು ಬಸವಣ್ಣನವರನ್ನು ಅರ್ಥ







ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ. ವೇದಿಕೆಯಲ್ಲಿ ಶ್ರೀ ಬ್ಯಾಡನೂರು ಶಾಂತವೀರಪ್ಪ, ಶ್ರೀ ಎಚ್.ಎಸ್. ಸಿದ್ಧಗಂಗಪ್ಪ, ಕಾರ್ಪೋರೇಟರ್ ಶ್ರೀ ರಾಜಣ್ಣ, ಪ್ರೊ. ಎಂ. ಪ್ರಸನ್ನಕುಮಾರ್, ಶ್ರೀ ನಿರಂಜನ್, ಶ್ರೀ ತ್ರಿಪುರಾಂತಕಮೂರ್ತಿ, ಶ್ರೀ ಬಿ.ಎಸ್. ಪ್ರಭುದೇವ್ ಮೊದಲಾದ ಗಣ್ಯರು

ಮಾಡಿಕೊಳ್ಳಲು ವಿಫಲರಾಗಿದ್ದೇವೆ ಎಂದು ತಿಳಿಸಿದ ಶ್ರೀಯುತರು ಸಂಘ ಬಸವೇಶ್ವರ ಜಯಂತಿಯನ್ನು ಆಚರಿಸುವುದರ ಮೂಲಕ ಬಸವಣ್ಣನವರ ಆದರ್ಶ ಮೌಲ್ಯಗಳನ್ನು ನೆನಪಿಸಿಕೊಂಡು ಜೀವನದಲ್ಲಿ ಆಳವಡಿಸಿಕೊಳ್ಳಲು ಇದರಿಂದ ಪ್ರೇರಣೆ ದೊರೆಯುತ್ತದೆ ಎಂದು ತಿಳಿಸಿ ದಾರ್ಶನಿಕ ಕವಿ ಜಾರ್ಜ್ ಬರ್ನಾರಡ್ ಷಾ ಅವರ ಕವನವನ್ನು ಉಲ್ಲೇಖಿಸಿ ಬದುಕು ಹೇಗಿರಬೇಕು ಎಂದು ಪರಿಚಯ ಮಾಡಿಕೊಟ್ಟರು.

ಇದೇ ಸಂದರ್ಭದಲ್ಲಿ ಯುವ ಉತ್ಸಾಹಿಗಳು, ಸಂಘದ ಶ್ರೇಯೋಭಿವೃದ್ಧಿಗೆ ಶ್ರಮಿಸುತ್ತಿರುವ ಉದ್ಯಮಿಗಳಾದ ಶ್ರೀ ಕೆ.ಟಿ. ನಿರಂಜನ್‌ರವರನ್ನು ಹಾಗೂ ಬ್ಯಾಡರಹಳ್ಳಿ ಪೋಲೀಸ್ ಠಾಣೆಯ ಪೋಲೀಸ್ ಇನ್ಸ್‌ಪೆಕ್ಟರ್ ಶ್ರೀ ರವಿಕುಮಾರ್‌ವರನ್ನು ಇದೇ ಸಂದರ್ಭದಲ್ಲಿ ಪರಮಪೂಜ್ಯರು ಸನ್ಮಾನಿಸಿ ಆಶೀರ್ವದಿಸಿದರು.

ಕಾರ್ಯಕ್ರಮದ ಕೊನೆಯಲ್ಲಿ ಸಂಘದ ಗೌರವಾಧ್ಯಕ್ಷರು, ಅಧ್ಯಕ್ಷರು, ಪದಾಧಿಕಾರಿಗಳು ಮತ್ತು ನಿರ್ದೇಶಕರುಗಳನ್ನು ನೆನಪಿನ ಕಾಣಿಕೆಯನ್ನು ನೀಡಿ ಪರಮಪೂಜ್ಯರು ಆಶೀರ್ವದಿಸಿದರು. ಅವರು ತಮ್ಮ



ದಿವ್ಯಾಶೀರ್ವಚನದಲ್ಲಿ ಸಂಘವನ್ನು ಬೆಳಸುವಲ್ಲಿ ಎಲ್ಲರೂ ಶ್ರಮವಹಿಸಬೇಕು. ಕಟ್ಟುವುದು ಕಷ್ಟ, ಎಲ್ಲರೂ ಒಗ್ಗೂಡಿದರೆ ಸಮಾಜಕ್ಕೆ ಸಾರ್ಥಕ ಕೆಲಸಗಳನ್ನು ಮಾಡಬಹುದು. ಈ ನಿಟ್ಟಿನಲ್ಲಿ ಹೇರೋಹಳ್ಳಿ ವೀರಶೈವ ಕ್ಷೇಮಾಭಿವೃದ್ಧಿ ಸಂಘ ಉತ್ತಮ ಕೆಲಸ ಮಾಡುವಂತಾಗಲಿ ಎಂದು ಹಾರೈಸಿದರು. ಸನ್ಮಾನಿತರ ಬಗ್ಗೆ ಪ್ರಶಂಸನೀಯ ಮಾತುಗಳನ್ನು ಆಡಿದ ಪೂಜ್ಯ ಶ್ರೀಗಳು ಸಾಹಿತ್ಯ ಕ್ಷೇತ್ರದಿಂದ ಶ್ರೀ ಎಚ್.ಎಸ್ ಸಿದ್ಧಗಂಗಪ್ಪನವರನ್ನು, ಉದ್ಯಮ ಕ್ಷೇತ್ರದಿಂದ ಶ್ರೀ ಕೆ.ಟಿ. ನಿರಂಜನ್‌ರವರನ್ನು ಮತ್ತು ಸಮಾಜ ಸೇವಾ ಕ್ಷೇತ್ರದಿಂದ ಶ್ರೀ ರವಿಕುಮಾರ್ ರವರನ್ನು ಆಯ್ಕೆ ಮಾಡಿ, ಸಂಘದವರು ಸನ್ಮಾನಿಸಿರುವುದು ಶ್ಲಾಘನೀಯವಾದುದು ಎಂದು ಅಭಿಪ್ರಾಯಪಟ್ಟರು.

ಸಮಾರಂಭ ಶ್ರೀಮತಿ ನಾಗರತ್ನ ಶಿವಣ್ಣ ಅವರ ಸಂಗಡಿಗರು ನಡೆಸಿಕೊಟ್ಟ ಪ್ರಾರ್ಥನೆಯೊಂದಿಗೆ ಆರಂಭವಾಯಿತು. ಪ್ರೊ. ಮುದ್ದುರಾಜ್‌ರವರು ಎಲ್ಲರನ್ನೂ ಸ್ವಾಗತಿಸಿದರು. ಶ್ರೀ ಆರ್. ಬಾಲರಾಜುರವರು ಅಚ್ಚುಕಟ್ಟಾಗಿ, ಸಂದರ್ಭೋಚಿತವಾಗಿ ಕಾರ್ಯಕ್ರಮವನ್ನು ನಿರೂಪಣೆ ಮಾಡಿದರು. ಶ್ರೀ ಹೆಚ್.ಎಸ್. ದಕ್ಷಿಣಮೂರ್ತಿಯವರ ಶರಣು ಸಮರ್ಪಣೆಯೊಂದಿಗೆ ಸಮಾರಂಭ ಮುಕ್ತಾಯವಾಯಿತು. ನಂತರ ಶರಣ ಸಂಸ್ಕೃತಿಯಂತೆ ಪ್ರಸಾದ ವ್ಯವಸ್ಥೆಯನ್ನು ಮಾಡಲಾಗಿತ್ತು. ಒಟ್ಟಿನಲ್ಲಿ ಈ ಅರ್ಥಪೂರ್ಣವಾದ ಸಮಾರಂಭ ಜನರ ಮನಸ್ಸಿನಲ್ಲಿ ಬಹುಕಾಲ ಹಚ್ಚಹಸಿರಾಗಿರುವಂತೆ ಮಾಡುವಲ್ಲಿ ಯಶಸ್ವಿಯಾಯಿತು. ಕಾರ್ಯಕ್ರಮ ಯಶಸ್ವಿಯಾಗಿ ನಡೆಯಲು ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಕಾರಣರಾದವರೆಲ್ಲರೂ ಅಭಿನಂದನಾರ್ಹರು.

ಶ್ರೀ ಸಿದ್ಧಗಂಗಾ ಮಠ, ತುಮಕೂರು

## ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳ ಪಟ್ಟಿ

**ತಾವು ನೀಡುವ ಹಣಕ್ಕೆ ಆದಾಯ ತೆರಿಗೆ ಇಲಾಖೆಯಿಂದ ೮೦ಜಿ ಅಡಿಯಲ್ಲಿ ಶೇ. ೫೦ರವರೆಗೆ ತೆರಿಗೆ ವಿನಾಯಿತಿ ಇರುತ್ತದೆ.**

| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೧೨೬೧. | ಶ್ರೀ ಎಂ.ಎನ್. ಮುನಿಯಪ್ಪಗೌಡ<br>ತಿಪಟೂರು | ೧,೦೦೮.೦೦ |
| ೧೨೬೨. | ಶ್ರೀ ಎನ್. ಬಸಪ್ಪ<br>ಕರೂರು | ೧,೦೦೦.೦೦ |
| ೧೨೬೩. | ಶ್ರೀ ಇ.ಆರ್. ನಾರಾಯಣಸ್ವಾಮಿ<br>ಬೆಂಗಳೂರು | ೧೦,೦೦೦.೦೦ |
| ೧೨೬೪. | ಶ್ರೀ ಎಸ್.ಎಂ. ಮಲ್ಲೇಶಪ್ಪ<br>ಹಾಸನ | ೨,೦೦೦.೦೦ |
| ೧೨೬೫. | ಶ್ರೀ ಎಂ.ಎಸ್. ಮಹದೇವಯ್ಯ<br>ಬೆಂಗಳೂರು | ೧,೦೦೦.೦೦ |
| ೧೨೬೬. | ಶ್ರೀಮತಿ ಸುಮನ<br>ಮೈಸೂರು | ೩೬,೫೦೦.೦೦ |
| ೧೨೬೭. | ಚಿ. ಎಸ್.ಪಿ. ಪ್ರತ್ಯೂಷ್<br>ಮೈಸೂರು | ೩೬,೫೦೦.೦೦ |
| ೧೨೬೮. | ಶ್ರೀ ವಿ.ಪಿ. ಗಂಗಣ್ಣ<br>ತುಮಕೂರು | ೧,೦೦೦.೦೦ |
| ೧೨೬೯. | ಮೆ॥ ಡೆನ್‌ಮೆಡ್ ಸಿಸ್ಟಮ್ಸ್<br>ಬೆಂಗಳೂರು | ೧,೦೦೧.೦೦ |
| ೧೨೭೦. | ಶ್ರೀ ಟಿ.ಎನ್. ಕೆಂಪಹೊನ್ನಯ್ಯ ಚಾರಿಟಬಲ್ ಟ್ರಸ್ಟ್<br>ತುಮಕೂರು | ೧,೦೦,೦೦೦.೦೦ |
| ೧೨೭೧. | ಶ್ರೀ ಕೆ. ನಾಗರಾಜು<br>ಬೆಂಗಳೂರು | ೧೦,೦೦೧.೦೦ |
| ೧೨೭೨. | ಮೆ॥ ರವಿ ಮೋಟಾರ್ಸ್<br>ಬೆಂಗಳೂರು | ೩,೦೦೦.೦೦ |
| ೧೨೭೩. | ಶ್ರೀ ಉಗ್ರೇಗೌಡ<br>ಗುಡ್ಡಪ್ಪನಾಯಕನಹಳ್ಳಿ | ೧,೦೦೧.೦೦ |
| ೧೨೭೪. | ಶ್ರೀ ಚನ್ನಯ್ಯ ಶೆಟ್ಟಿ<br>ಬ್ಯಾಗವಾಟ | ೧,೦೦೧.೦೦ |
| ೧೨೭೬. | ಶ್ರೀ ಹೆಚ್.ಎಸ್. ಬಸವಲಿಂಗಪ್ಪ<br>ಹಳೇಕೋಟೆ | ೫,೦೦೧.೦೦ |
| ೧೨೭೭. | ಶ್ರೀ ಸದಾಶಿವಯ್ಯ<br>ಕೊರಟಗೆರೆ | ೨,೦೦೦.೦೦ |
| ೧೨೭೮. | ಶ್ರೀ ನಟರಾಜು ಪ್ರೊಪ್ರೈಟ್<br>ತುಮಕೂರು | ೧,೦೧೯.೦೦ |
| ೧೨೭೯. | ಶ್ರೀ ಸಿದ್ಧಲಿಂಗಯ್ಯ<br>ಕೋರ | ೫೦೦.೦೦ |

| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೧೨೮೦. | ಶ್ರೀ ಟಿ. ಗಿರಿಗೌಡ<br>ಕುಂದನಹಳ್ಳಿ | ೧,೦೦೦.೦೦ |
| ೧೨೮೧. | ಶ್ರೀ ಟಿ. ಚನ್ನಬಸವಯ್ಯ<br>ತಾಳಗುಂದ | ೧,೦೦೧.೦೦ |
| ೧೨೮೨. | ಶ್ರೀ ಸಿದ್ಧಪ್ಪ<br>ಮೋಕಗೋನಾಳ್ | ೧,೦೦೧.೦೦ |
| ೧೨೮೩. | ಶ್ರೀ ಕೆ. ಸಿದ್ಧಯ್ಯ<br>ಕುರುಗುಂದ | ೧,೦೦೧.೦೦ |
| ೧೨೮೪. | ಶ್ರೀ ಪಿ. ಷಡಾಕ್ಷರಿ<br>ಬೆಂಗಳೂರು | ೧,೦೦೨.೦೦ |
| ೧೨೮೫. | ಶ್ರೀ ಟಿ. ಲಕ್ಷ್ಮೀನಾರಾಯಣ<br>ಬೆಂಗಳೂರು | ೧,೦೦೦.೦೦ |
| ೧೨೮೬. | ಶ್ರೀ ಚಂದ್ರಶೇಖರಯ್ಯ<br>ಬೆಂಗಳೂರು | ೧,೦೦೦.೦೦ |
| ೧೨೮೭. | ಶ್ರೀ ಟಿ. ತಮ್ಮಯ್ಯ<br>ಹರಿವಣಪುರ | ೧,೦೦೦.೦೦ |
| ೧೨೮೮. | ಶ್ರೀ ಎನ್. ದೇವೇಗೌಡ<br>ನಿಳವಾಗಿಲು | ೧,೦೦೦.೦೦ |
| ೧೨೮೯. | ಶ್ರೀ ಕೆ.ವಿ. ರುದ್ರಪ್ಪ<br>ಕೊಡಿಗೇಹಳ್ಳಿ | ೧,೦೦೦.೦೦ |
| ೧೨೯೦. | ಶ್ರೀ ಮುದುಕಪ್ಪ<br>ಗಂಗಾವತಿ | ೫೦೧.೦೦ |
| ೧೨೯೧. | ಶ್ರೀ ಬಿ.ಎಂ. ಮಹರುದ್ರಪ್ಪ<br>ಬಾಳ್ಳುಪೇಟೆ | ೧೦,೦೦೦.೦೦ |
| ೧೨೯೨. | ಶ್ರೀ ಜಿ. ಚಂದ್ರಮೌಳಿ<br>ಬೆಂಗಳೂರು | ೧,೦೦೦.೦೦ |
| ೧೨೯೩. | ಶ್ರೀ ಯಲ್ಲನಗೌಡ<br>ರಾರವಿ | ೩,೦೦೦.೦೦ |
| ೧೨೯೪. | ಶ್ರೀ ಆರ್. ಶಂಕರ್<br>ಭರಮಸಾಗರ | ೧,೦೦೦.೦೦ |
| ೧೨೯೫. | ಶ್ರೀಮತಿ ಎನ್.ಸಿ. ಅನ್ನಪೂರ್ಣಮ್ಮ<br>ಶ್ರೀ ಹೆಚ್. ಗಂಗಪ್ಪ<br>ಬೆಂಗಳೂರು | ೯೦,೦೦೦.೦೦ |

(ಮುಂದುವರೆಯುತ್ತದೆ)





ಜೈನ ಧರ್ಮ ಗುರುಗಳಾದ ಶ್ರವಣಬೆಳಗೊಳದ ಪೂಜ್ಯ ಶ್ರೀ ಶ್ರೀ ಚಾರುಕೀರ್ತಿ ಭಟ್ಟಾರಕ ಸ್ವಾಮಿಗಳವರು ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀ ಶ್ರೀಗಳವರ ಆರೋಗ್ಯ ವಿಚಾರಿಸಿದರು. ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ಉಪಸ್ಥಿತರಿದ್ದರು.



ನೊಣವಿನಕೆರೆ ಕಾಡುಸಿದ್ಧೇಶ್ವರ ಮಠದ ಪೂಜ್ಯ ಶ್ರೀ ಶ್ರೀ ಕರಿಬಸವ ದೇಶಿಕೇಂದ್ರ ಸ್ವಾಮಿಗಳು ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀ ಶ್ರೀಗಳವರ ದರ್ಶನ ಮಾಡಿ ಆರೋಗ್ಯ ವಿಚಾರಿಸಿದರು.



ಶ್ರೀ ಬೆಟ್ಟದಹಳ್ಳಿ ಗವಿಮಠದ ಪೂಜ್ಯ ಶ್ರೀ ಶ್ರೀ ಚಂದ್ರಶೇಖರ್ ಸ್ವಾಮಿಗಳು ಶ್ರೀಮಠಕ್ಕೆ ಭೇಟಿ ನೀಡಿ ಪೂಜ್ಯ ಶ್ರೀಗಳವರ ದರ್ಶನ ಮಾಡಿ, ಆರೋಗ್ಯ ವಿಚಾರಿಸಿದರು. ಈ ಸಂದರ್ಭದಲ್ಲಿ ಶ್ರೀ ಕೊ.ರಂ. ಬಸವರಾಜು ಮೊದಲಾದವರು ಉಪಸ್ಥಿತರಿದ್ದರು.



ಹೊಸದುರ್ಗದ ಶ್ರೀ ಭಗೀರಥ ಪೀಠದ ಪೂಜ್ಯ ಶ್ರೀ ಶ್ರೀ ಪುರುಷೋತ್ತಮಾ ನಂದಾಪುರ ಸ್ವಾಮಿಗಳು ಶ್ರೀಮಠಕ್ಕೆ ಭೇಟಿ ನೀಡಿ ಪೂಜ್ಯ ಶ್ರೀ ಶ್ರೀಗಳವರ ದರ್ಶನ ಮಾಡಿ ಆರೋಗ್ಯ ವಿಚಾರಿಸಿದರು. ಈ ಸಂದರ್ಭದಲ್ಲಿ ಅಖಿಲ ಉಪ್ಪಾರ ವಿದ್ಯಾಭಿವೃದ್ಧಿ ಸಂಘದ ಪದಾಧಿಕಾರಿಗಳು ಉಪಸ್ಥಿತರಿದ್ದರು.



ಕಾಗಿನೆಲೆ ಮಹಾಸಂಸ್ಥಾನದ ಕನಕಗುರು ಪೀಠದ ಶ್ರೀ ಶ್ರೀ ನಿರಂಜನಾನಂದಪುರಿ ಸ್ವಾಮೀಜಿ, ಕೂಡಲಸಂಗಮದ ಪಂಚಮಸಾಲಿ ಪೀಠದ ಶ್ರೀ ಶ್ರೀ ಜಯಮೃತ್ಯುಂಜಯ ಸ್ವಾಮಿಗಳು, ಹೊಸದುರ್ಗ ಕುಂಚಟಿಗ ಸಂಸ್ಥಾನದ ಶ್ರೀ ಶ್ರೀ ಶಾಂತವೀರ ಸ್ವಾಮಿಗಳು, ಚಿತ್ರದುರ್ಗದ ಬೋವಿ ಗುರುಪೀಠದ ಶ್ರೀ ಶ್ರೀ ಇಮ್ಮಡಿ ಸಿದ್ಧರಾಮೇಶ್ವರ ಸ್ವಾಮಿಗಳು, ಕಾಗಿನೆಲೆ ಶಾಖಮಠದ ಶ್ರೀ ಶ್ರೀ ಈಶ್ವರಾನಂದಪುರಿ ಸ್ವಾಮೀಜಿ ಶ್ರೀಮಠಕ್ಕೆ ಭೇಟಿ ನೀಡಿ ಪೂಜ್ಯರ ದರ್ಶನ ಮಾಡಿ, ಆರೋಗ್ಯ ವಿಚಾರಿಸಿದರು.



ಹೇರೋಹಳ್ಳಿ ವೀರಶೈವ ಕ್ಷೇಮಾಭಿವೃದ್ಧಿ ಸಂಘ ಏರ್ಪಡಿಸಿದ್ದ ಬಸವ ಜಯಂತಿ ಕಾರ್ಯಕ್ರಮದಲ್ಲಿ ಜಾನಪದ ವಿದ್ವಾಂಸ ಹಾಗೂ ಸಿದ್ಧಗಂಗಾ ಮಾಸಪತ್ರಿಕೆಯ ಸಹ ಸಂಪಾದಕ ಶ್ರೀ ಎಚ್.ಎಸ್. ಸಿದ್ಧಗಂಗಪ್ಪ ಅವರನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ಸನ್ಮಾನಿಸಿ ಆಶೀರ್ವದಿಸಿದರು. ಈ ಸಂದರ್ಭದಲ್ಲಿ ಬಿಬಿಎಂಪಿ ಸದಸ್ಯರಾದ ಶ್ರೀ ರಾಜಣ್ಣ, ಹಾಗೂ ಶ್ರೀ ತ್ರಿಪುರಾಂತಕಮೂರ್ತಿ, ಶ್ರೀ ಬಿ.ಎಸ್. ಪ್ರಭುದೇವ್, ಪ್ರೊ. ಎಂ. ಪ್ರಸನ್ನಕುಮಾರ್ ಮೊದಲಾದ ಗಣ್ಯರು ಉಪಸ್ಥಿತರಿದ್ದರು.

RNI No. 17139/69 "Siddaganga" Monthly - Postal Reg. No. L2/RNP/385/TMR/2015-17



ಮಾಜಿ ಪ್ರಧಾನಮಂತ್ರಿ ಶ್ರೀ ಹೆಚ್.ಡಿ. ದೇವೇಗೌಡ ಅವರು ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯರ ದರ್ಶನ ಮಾಡಿ, ಆರೋಗ್ಯ ವಿಚಾರಿಸಿದರು. ಈ ಸಂದರ್ಭದಲ್ಲಿ ಜೆಡಿಎಸ್ ಮುಖಂಡರು ಉಪಸ್ಥಿತರಿದ್ದರು.



ಬಿಜಿಎಸ್ ಗ್ಲೋಬಲ್ ಆಸ್ಪತ್ರೆಯಲ್ಲಿ ಪರಮಪೂಜ್ಯ ಶ್ರೀಗಳವರನ್ನು ಮುಖ್ಯಮಂತ್ರಿ ಶ್ರೀ ಸಿದ್ಧರಾಮಯ್ಯ, ಮಾಜಿ ಮುಖ್ಯಮಂತ್ರಿ ಹಾಗೂ ಬಿಜೆಪಿ ರಾಜ್ಯಾಧ್ಯಕ್ಷರಾದ ಶ್ರೀ ಬಿ.ಎಸ್ ಯಡಿಯೂರಪ್ಪ ಅವರು ದರ್ಶನ ಮಾಡಿ ಆರೋಗ್ಯ ವಿಚಾರಿಸಿದರು.



ಕೇಂದ್ರ ಆಹಾರ ಸಂರಕ್ಷಣೆ ರಾಜ್ಯ ಸಚಿವೆ ಶ್ರೀಮತಿ ಸಾಧ್ವಿ ನಿರಂಜನ್ ಜ್ಯೋತಿಯವರು ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀ ಶ್ರೀಗಳವರ ಆಶೀರ್ವಾದ ಪಡೆದರು. ಈ ಸಂದರ್ಭದಲ್ಲಿ ಬಿಜೆಪಿ ಮುಖಂಡರು ಉಪಸ್ಥಿತರಿದ್ದರು.



ಗೃಹಸಚಿವ ಡಾ. ಜಿ. ಪರಮೇಶ್ವರ ಅವರು ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀ ಶ್ರೀಗಳವರ ದರ್ಶನ ಮಾಡಿ ಆರೋಗ್ಯ ವಿಚಾರಿಸಿದರು. ಈ ಸಂದರ್ಭದಲ್ಲಿ ಸಂಸದರಾದ ಶ್ರೀ ಮುದ್ದಹನುಮೇಗೌಡ ಮೊದಲಾದವರು ಉಪಸ್ಥಿತರಿದ್ದರು.



ನೂತನ ಸಚಿವರಾಗಿ ಪ್ರಮಾಣ ವಚನ ಸ್ವೀಕರಿಸಿದ ಶ್ರೀ ಈಶ್ವರ ಖಂಡ್ರೆಯವರು ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀ ಶ್ರೀಗಳವರ ದರ್ಶನ ಮಾಡಿ ಆಶೀರ್ವಾದ ಪಡೆದರು



ಬಿಜಿಎಸ್ ಆಸ್ಪತ್ರೆಯ ವೈದ್ಯರಾದ ಡಾ. ರವೀಂದ್ರ ಮತ್ತು ಶ್ರೀಮತಿ ರಶ್ಮಿ ರವೀಂದ್ರ ಹಾಗೂ ಡಾ. ವೆಂಕಟರಮಣ ಮತ್ತು ಶ್ರೀಮತಿ ಶೋಭಾ ವೆಂಕಟರಮಣ ಅವರೊಂದಿಗೆ ಕುಟುಂಬ ಸಮೇತರಾಗಿ ಶ್ರೀಮಠಕ್ಕೆ ಭೇಟಿ ನೀಡಿ ಪೂಜ್ಯ ಶ್ರೀ ಶ್ರೀಗಳವರ ದರ್ಶನ ಮಾಡಿ ಆಶೀರ್ವಾದ ಪಡೆದರು.

Cover printed at : Santanjali Graphics, B-71, KSSIDC Indl. Area, 6th Block, Rajajinagar, Bengaluru-10. Ph : 2340...